2979

ಓಂ

ಸಟೀಕ

# ಬಸವೇಶ್ವರಜನನ





ಮೈಸೂರು :

ಕೌರ್ಟ್ ಎಲೆಕ್ಟ್ರಿಕ್ ಪ್ರೆಸ್

1923

# ಉಪೋದ್ಘಾತವು.

---

"ಅಚತುರ್ವದನೊಬ್ರಹ್ಮಾ ದ್ವಿಬಾಹುರಪರೋಹರಿಃ॥ಅಭಾಲಲೋಚನಶ್ಶಂಭುರ್ಭಗವಾನ್ ಬಾದರಾಯಣಃ" ಎಂಬ ವಚನದಿಂದ ವಿಷ್ಣುರುದ್ರಬ್ರಹ್ಮಾತ್ಮಕವಾದ ವ್ಯಾಸಮಹರ್ಷಿಯಿಂದ ಪ್ರಣೀತಗಳಾದ ಅಷ್ಟಾದಶಪುರಾಣಾಂತರ್ಗತವಾದ ಸ್ಕಾಂದಪುರಾಣದಲ್ಲಿ ಯಸ್ಯವಕ್ತ್ರೆಸ್ಥಿತಂದೇವಿ ಬಸವೇತ್ಯಕ್ಷರತ್ರಯಂ॥ ವಸಾಮಿಸತತಂತತ್ರಸತ್ಯಂಸತ್ಯಂವದಾಮ್ಯಹಂ॥ ಎಂಬ ಶಿವಾಗಮವಚನ ಪ್ರಾಮಾಣ್ಯದಿಂದ ಶಿವಧರ್ಮಸ್ವರೂಪನಾದ ನಂದೀಶ್ವರನು ಶಿವಾಜ್ಞೆಯಿಂದ ಭೂಲೋಕದಲ್ಲಿ ಅವತರಿಸಿ ಗುರುಸ್ವರೂಪನಾದ ಸಂಗಮೇಶ್ವರನಿಂದ ಶಿವದೀಕ್ಷಾಪೂರ್ವಕವಾದ ಶಿವಲಿಂಗಧಾರಣೆಯಂ ಪಡೆದು ಅಪ್ರಾಕೃತವೆನಿಸಿದ ವೀರಶೈವಮತವನ್ನು ಅವಲಂಬಿಸಿ ಅನೇಕ ವಿಧವಾದ ಸಿದ್ಧಿಗಳ ಬಲದಿಂದ ಮಹಿಮೆಗಳನ್ನು ತೋರಿಸಿ ಆ ಸಮಯದಲ್ಲಿ ಶೈಥಿಲ್ಯವನ್ನು ಹೊಂದಿದ ಶ್ರೀ ಶಕ್ತಿವಿಶಿಷ್ಟಾದ್ವೈತವೆನಿಸಿದ ಪವಿತ್ರವಾದ ವೀರಶೈವಮತವನ್ನು ಅಭಿವೃದ್ಧಿಗೊಳಿಸಿ ಕಡೆಗೆ ಸಂಗಮನಾಥನಲ್ಲಿ ಏಕತ್ವವಂ ಪಡೆದನೆಂಬ ಕುಮಾರಾಗಸ್ತ್ಯಸಂವಾದರೂಪವಾದ ಬಸವೇಶ್ವರ ಚರಿತ್ರೆಯು ಪ್ರಸಿದ್ಧವಾಗಿರುವುದಷ್ಟೆ. ಅದರಲ್ಲಿ ನಂದೀಶ್ವರವೃತ್ತ, ಬಸವೇಶ್ವರಾವತರಣ ಕರ್ಮನಿರಸನವೆಂಬ ಮೂರು ಭಾಗಗಳನ್ನು ಮಾತ್ರ ಕನ್ನಡ ಟೀಕೆಯೊಡನೆ ಮುದ್ರಣಮಾಡಿಸಿದಲ್ಲಿ ಶ್ರೀ ಬಸವೇಶ್ವರನ ಮಹಿಮಾತಿಶಯಗಳೂ, ವೀರಶೈವಸಿದ್ಧಾಂತರಹಸ್ಯವೂ ನಮಗೆ ಸುಲಭವಾಗಿ ತಿಳಿಯುವುವು ಎಂದು ಅನೇಕ ವೀರಶೈವ ಮಹಾಶಯರು ಅಪೇಕ್ಷಿಸಿದ್ದರಿಂದ ಅವರ ಅಪೇಕ್ಷಾನುಸಾರವಾಗಿ ಸ್ಕಾಂದಪುರಾಣಾಂತರ್ಗತವಾದ ಈ ಮೂರು ಅಧ್ಯಾಯಗಳಿಗೆ ಮಾತ್ರ ಕನ್ನಡ ಟೀಕೆಯನ್ನು ಬರಿಸಿ

ಮುದ್ರಣ ಮಾಡಿಸಲ್ಪಟ್ಟಿತು. ಈ ಅಧ್ಯಾಯಗಳನ್ನು ಓದಿದವರಿಗೆ ಮತದ ನಿಜಾಂಶವು ಗೊತ್ತಾಗುವುದಲ್ಲದೆ ಬಸವೇಶ್ವರನ ಮಹತ್ವವೂ ಪ್ರಾಕೃತ ಮತ್ತು ಅಪ್ರಾಕೃತ ಮತಗಳ ಸ್ವರೂಪವೂ ಸ್ಪಷ್ಟವಾಗುವುವು.

ಈ ಪುಸ್ತಕವನ್ನು ಪ್ರತಿಯೊಬ್ಬ ವೀರಶೈವರೂ ತರಿಸಿಕೊಂಡು ಚೆನ್ನಾಗಿ ಓದಿದರೆ ತಕ್ಕಮಟ್ಟಿಗಾದರೂ ಈ ಮತದ ತತ್ವಾರ್ಥವು ಗೊತ್ತಾಗುವುದು.

ಗ್ರಂಥಪ್ರಸಾರಕ.





ಬಸವೇಶ್ವರ ಜನನ.

(ಬಣ್ಣದ ಚಿತ್ರಪಟಪ್ರಸಾರಕರಾದ ಮ|| ರಾ|| ಎಚ್. ಜಿ. ಲಿಂಗಣ್ಣ ಆಂಡ್ ಕೊ., ಯವರ ಉದಾರಾನುಮತಿಯಿಂದ)

ಹರಃಓಂ.

ಜಯತಿಬಸವರಾಜಸ್ಥೌಲ್ಯಕನ್ಯೈರ್ಮಾಲ್ಯಪೂಜಃ |
ಪ್ರಮಥಗಣಸಮಾಜಪ್ರೋಲ್ಲಸದ್ಭಕ್ತಿನೈಜಃ |
ಪ್ರಹತವಿನಮದಾರ್ತಿಸ್ಸಾಯದಾಮ್ನಾಯಮೂರ್ತಿ |
ಸ್ಥಿರವಿಗಮಿತಕೀರ್ತಿ ಶ್ರೀವೃಷಾಧೀಶಮೂರ್ತಿಃ ||

# ಬಸವೇಶ್ವರ ಜನನ.

ಅಥ ಬಸವೇಶ್ವರಪುರಾಣೆ ಕುಮಾರಾಗಸ್ತ್ಯಸಂವಾದೆ ನಂದೀಶ್ವರವ್ರತ ಪ್ರತಿಪಾದಕಃ ತೃತೀಯೋಧ್ಯಾಯಃ ಸಟೀಕಃ ಪ್ರಾರಭ್ಯತೆ.

---

ಇಥ್ಥಮುಕ್ತ್ವಾಕುಮಾರೋಸೌ ಕುಂಭಜಂಮುನಿಪುಂಗವಂ |
ನಂದೀಶ್ವರಾವತರಣ ಹೇತುಮಾಹ ಷಡಾನನಃ ||

ಟೀ || ಈ ಪ್ರಕಾರವಾಗಿ ಷಣ್ಮುಖಸ್ವಾಮಿಯು ಋಷಿಶ್ರೇಷ್ಠನಾದ ಅಗಸ್ತ್ಯನನ್ನು ಕುರಿತು ಹೇಳಿ, ನಂದೀಶ್ವರಾವತಾರಕ್ಕೆ ಕಾರಣವನ್ನು ಹೇಳಲುಪಕ್ರಮಿಸಿದನು.

ತತೋನಂದೀಶ್ವರಶ್ರೀಮಾನ್ ಶಿವಯೋಗಪರಾಯಣಃ |
ದೇಶಂವಿಚಿಂತಯಾಮಾಸ ಸ್ವಾವತಾರಾರ್ಥಮುತ್ತಮಂ ||

ಟೀ || ಕೇಳೈ ಅಗಸ್ತ್ಯನೇ ಅನಂತರದಲ್ಲಿ ಅಣಿಮಾದ್ಯಷ್ಟೈಶ್ವರ್ಯ ಸಂಪನ್ನನಾದ ಶಿವಯೋಗ ತತ್ಪರನಾದ ನಂದಿಕೇಶ್ವರನು ಈಶ್ವರಾಜ್ಞೆಯನ್ನು ಪಡೆದ ಬಳಿಕ ತಾನು ಅವತಾರವಂ ಮಾಡುವುದಕ್ಕೆ ಶ್ರೇಷ್ಠವಾದ ಸ್ಥಳವನ್ನು ನೆನೆದನು.

ಅನುಜ್ಞಾತಶ್ಶಿವೇನೈವ ಸರ್ವತತ್ವಾರ್ಥವೇದಿನಾ |
ಏವಂಪ್ರಹೃಷ್ಟಮನಸಾನಂದಿನಾಚ ಮಹಾತ್ಮನಾ ||
ಶಿವಭಕ್ತಿಂ ಮರ್ತ್ಯಲೋಕೇ ನಿತ್ಯಂಸ್ಥಾಪಿತುಮುತ್ತಮಾಂ |
ಕೈಲಾಸಾದಾಯಯೌ ತೂರ್ಣಂ ನಾರದೋಮುನಿಸತ್ತಮಃ ||

ಟೀ || ಇತ್ತಲಾಗಿ ಸಕಲ ತತ್ವಾರ್ಥಗಳನ್ನು ಬಲ್ಲಂಥ ಶಿವನಿಂದಲೂ ಸಂತುಷ್ಟಹೃದಯನಾದ ನಂದೀಶ್ವರನಿಂದಲೂ ಅಪ್ಪಣೆಯನ್ನು ಪಡೆದ ನಾರದಋಷಿಯು ಭೂಲೋಕದಲ್ಲಿ ನಿರಂತರದಲ್ಲಿಯೂ ಉತ್ಕೃಷ್ಟವಾದ ಶಿವಭಕ್ತಿಯನ್ನು ಸ್ಥಾಪಿಸುವದಕ್ಕೋಸ್ಕರ ಕೈಲಾಸದಿಂದ ಶೀಘ್ರವಾಗಿ ಬಂದನು.

ಜಂಬೂದ್ವೀಪೇಮಹಾಪುಣ್ಯೇ ಮುನಿಭಿಃಪರಿವಾರಿತೇ |
ಶ್ರೀಶೈಲಸ್ಯಚ ವಾಯವ್ಯಭಾಗೇಪುಣ್ಯಾಶ್ರಮಾವೃತೇ ||
ಕರ್ಣಾಟವಿಷಯೇ ರಮ್ಯೇ ಕರ್ಮಸಿದ್ಧಿಪ್ರದಾಯಕೇ |
ಹಿಂಗುಳೀಪುರಮುತ್ಕೃಷ್ಟಂ ಪ್ರವಿವೇಶಮುನೀಶ್ವರಃ ||

ಟೀ || ಜಂಬೂದ್ವೀಪದಲ್ಲಿ ಅಧಿಕವಾದ ಪ್ರಭಾವವುಳ್ಳ ಋಷಿಗಳಿಂದ ಸೇವಿಸಲ್ಪಟ್ಟಂಥ, ಪರಿಶುದ್ಧಾಶ್ರಮಗಳಿಂದ ಸುತ್ತಲ್ಪಟ್ಟಂಥ ಶ್ರೀಶೈಲದ ವಾಯವ್ಯಭಾಗದಲ್ಲಿ ರಮಣೀಯವಾದಂಥ, ಕ್ರಿಯಾಸಿದ್ಧಿಗಳನ್ನು ಕೊಡುವಂಥ, ಕರ್ಣಾಟದೇಶದಲ್ಲಿ ಶ್ರೇಷ್ಠವಾದ ಹಿಂಗುಳಿಯೆಂಬ ಪಟ್ಟಣವನ್ನು ನಾರದಮುನಿಯು ಬಂದುಹೊಕ್ಕನು.

ವಿಚಿತ್ರತೋರಣೋಪೇತಂ ನಾನಾರತ್ನೈಕಶೋಭಿತಂ |
ವಿವೇಶಮಾದಿರಾಜಸ್ಯ ಗೃಹಂತ್ರಿದಶಸಂಯಮಿ ||

ಟೀ || ಸ್ವರ್ಗಲೋಕದ ಮುನಿಯಾದ ನಾರದನು ನಾನಾವಿಧವಾದ ತೋರಣಗಳಿಂದ ಕೂಡಿರುವಂಥ, ಅನೇಕಪ್ರಕಾರವಾದ ರತ್ನಗಳಿಂದ ಪ್ರಕಾಶಿಸಲ್ಪಟ್ಟಂಥ ಮಾದಿರಾಜನೆಂಬ ಶಿವಬ್ರಾಹ್ಮಣನ ಮನೆಯನ್ನು ಪ್ರವೇಶಿಸಿದನು.

ಯತವ್ರತಂ ಮಾದಿರಾಜಂ ಮಾದಾಂಬಾಂಚಪತಿವ್ರತಾಂ |
ದದರ್ಶದಂಪತೀತತ್ರ ಚಿಂತಾವ್ಯಾಕುಲಮಾನಸೌ ||

ಟೀ || ಆ ಮನೆಯಲ್ಲಿ ನಾರದಋಷಿಯು ಪುತ್ರಚಿಂತೆಯಿಂದ ಕಲಕಿದ ಮನಸ್ಸುಳ್ಳಂಥ, ಜಾಯಾಪತಿಗಳಾದಂಥ ಪುತ್ರಕಾಮವ್ರತವನ್ನುಳ್ಳ ಮಾದಿರಾಜನನ್ನೂ, ಮಹಾಪತಿವ್ರತೆಯಾದ ಮಾದಾಂಬೆಯನ್ನೂ ದಿವ್ಯದೃಷ್ಟಿಯಿಂದ ನಿರೀಕ್ಷಿಸಿದನು.

ತಾವುತ್ಥಾಯ ಮಹಾವೇಗಾದಭಿಜಗ್ಮತುರಾದರಾತ್ ।
ದದತುರ್ಮಧುಪರ್ಕಂತಾವರ್ಘ್ಯಪಾದ್ಯಪುರಸ್ಸರಂ ॥

ಟೀ ॥ ಆ ನಾರದಮುನಿಯನ್ನು ನೋಡಿದ ಕ್ಷಣವೇ, ಜಾಯಾಪತಿಗಳಾದ ಮಾದಾಂಬಾ ಮಾದಿರಾಜರು ಅತಿ ಪ್ರೀತಿಯಿಂದ ಜಾಗ್ರತೆಯಾಗಿ, ಪ್ರತ್ಯುತ್ಥಾನಾದಿಗಳಂ ಮಾಡಿ, ಸಾಷ್ಟಾಂಗವಾಗಿ ನಮಸ್ಕರಿಸಿ, ಅರ್ಘ್ಯಪಾದ್ಯಮಧುಪರ್ಕಾದಿಗಳಿಂದ, ನಾರದನನ್ನು ಭಕ್ತಿಯಿಂದ ಪೂಜಿಸಿ, ಪಾದೋದಕವನ್ನು ಶಿರಸ್ಸಿನಲ್ಲಿ ಪ್ರೋಕ್ಷಿಸಿಕೊಂಡರು.

ಅಥೋಪವಿಷ್ಟಸ್ಸಮುನಿ ಸ್ಸ್ವರ್ಣಪೀಠೇಮನೋಹರೇ ।
ಪ್ರಾಹಗಂಭೀರಯಾವಾಚಾ ಮಂದಸ್ಮಿತಮುಖಾಂಬುಜಃ ॥

ಟೀ ॥ ಆಮೇಲೆ ಮನೋಹರವಾದ ಮಣಿಖಚಿತವಾದ ಕನಕಪೀಠದಲ್ಲಿ ಆ ನಾರದಮುನಿಯು ಕುಳಿತುಕೊಂಡವನಾಗಿ ದರಹಸಿತಾಸ್ಯಾಬ್ಜನಾಗಿ ಗಂಭೀರವಾದ ಮಾತಿನಿಂದ ಅವರ ಯೋಗಕ್ಷೇಮಗಳನ್ನು ಕೇಳಲೋಸ್ಕರವಾಗಿ ಹೇಳಿದನು.

ಮಾದಿರಾಜ ಮಹಾಭಾಗ ಸರ್ವಶಾಸ್ತ್ರಾರ್ಥಸಾರಗ ।
ಕಚ್ಚಿತ್ತೇಕುಶಲಂಬ್ರಹ್ಮನ್ಕಚ್ಚಿದ್ಭಕ್ತೇಸ್ತವಾನಘ ॥

ಟೀ ॥ ಮಹೈಶ್ವರ್ಯಸಂಪನ್ನನಾಗಿಯೂ, ಸಮಸ್ತಶಾಸ್ತ್ರಂಗಳ ಅರ್ಥವನ್ನು ಕೂಲಂಕಷವಾಗಿ ಬಲ್ಲಬ್ರಹ್ಮಜ್ಞಾನಿಯಾಗಿಯೂ ದೋಷರಹಿತನಾಗಿಯೂ ಇರುವ ಎಲೈ ಮಾದಿರಾಜನೇ, ನಿನಗೆ ಕ್ಷೇಮವೇ, ನಿನ್ನ ಭಕ್ತಿಗೆ ಕ್ಷೇಮವೇ, ಎಂದು ನಾರದಮುನಿಯು ಯೋಗಕ್ಷೇಮಗಳನ್ನು ವಿಚಾರಿಸಿದನು.

ಮಾದಾಂಬಾಪಿ ಮಹಾಭಾಗಾ ಪಾತಿವ್ರತ್ಯಪರಾಯಣಾ ।
ದೃಢವ್ರತಾತಿಥೇಯಾಸಾ ಶುಭಾಚಾರಾನುವರ್ತಿನೀ ॥

ಟೀ ॥ ಮಹೈಶ್ವರ್ಯವತಿಯಾದ, ಪತಿಸಂಬಂಧಿಯಾದ ಭಕ್ತಿತತ್ಪರಳಾದ, ದೃಢವಾದ ವ್ರತಗಳನ್ನುಳ್ಳ ಅತಿಥಿಗಳ ಪೂಜೆಮಾಡಿದ ಆ ಮಾದಾಂಬೆಯು, ಮಂಗಳಕರವಾದ ಆಚಾರದಲ್ಲಿ ವರ್ತಿಸುತ್ತ ಇರುವಳೆ?

ದಿವಾ ಸುಧಾಂಶುವದಿದಂ ನಿಶಿ ಪದ್ಮಮಿವಾನನಂ ।
ದೃಶ್ಯತೇಸ್ಯಾಃಪ್ರಭಾಹೀನಂ ಚಿಂತಯಾ ಪರಿಶೋಭಿತಂ ॥

ಟೀ || ಚಿಂತೆಯಿಂದೊಡಗೂಡಿದ ಈ ಮಾದಾಂಬೆಯ ಮುಖವು, ಹಗಲಿನಲ್ಲಿ ತೋರುವ ಚಂದ್ರಬಿಂಬದಹಾಗೆಯೂ ರಾತ್ರಿಯಲ್ಲಿ ಕಾಣಿಸುವ ತಾವರೆಯಹಾಗೆಯೂ ಪ್ರಕಾಶಹೀನವಾಗಿ ಕಾಣಲ್ಪಡುತ್ತಿದೆ.

ಕಾರಣಂ ವದ ಚಿಂತಾಯಾ ಸ್ತತ್ವತೋ ನೇ ದ್ವಿಜೋತ್ತಮ |
ತಛ್ರುತ್ವಾ ಮಾದಿರಾಜೋಪಿ ಗೃಹಿಣೀಂ ಸಮಚೋದಯತ್ ||

ಟೀ || ಬ್ರಾಹ್ಮಣಶ್ರೇಷ್ಠನಾದ ಎಲೈ ಮಾದಿರಾಜನೇ ಚಿಂತೆಗೆ ಹೇತುವನ್ನು ಯಥಾರ್ಥವಾಗಿ ಹೇಳು ಎಂದು ಬೆಸಗೊಳ್ಳುವ ನಾರದನ ವಾಕ್ಯವನ್ನು ಮಾದಿರಾಜನು ಕೇಳಿದವನಾಗಿ ತನ್ನ ಸ್ತ್ರೀಯನ್ನು ಹೇಳಿಕೋ ಎಂದವನಾದನು.

ವಿನಯಾತ್ಪತ್ಯುವಾಚೇದಂ ಮಾದಾಂಬಾ ಮುನಿಪುಂಗವಂ ||

ಟೀ || ತನ್ನ ವಲ್ಲಭನಾದ ಮಾದಿರಾಜನ ವಾಕ್ಯವನ್ನು ಕೇಳಿ ಮಾದಾಂಬೆಯು ಶ್ರದ್ಧಾಪೂರ್ವಕಮಾಗಿ ಆ ನಾರದನನ್ನು ಕುರಿತು ಮುಂದೆ ಹೇಳುವ ರೀತಿಯಾಗಿ ನುಡಿದಳು.

ಭವಾದೃಶಾಮಹಾತ್ಮಾನೊ ವೀತರಾಗಾಹ್ಯಕಲ್ಮಷಾಃ |
ಪರಪ್ರಯೋಜನಾಸಕ್ತ ಹೃದಯಾಃಪುಣ್ಯವೃತ್ತಯಃ ||
ಪರಾಪತ್ತೂಲಸಂಘಾತಪಾವಕೀಕೃತಬುದ್ಧಯಃ |
ಮಹರ್ಷಯೋಪಿ ವ್ಯಾಸಾದ್ಯಾಃ ಸ್ಮರ್ತಾರಃ ಶಂಸಿತವ್ರತಾಃ |
ಪ್ರಶಸ್ಯಂತೇಚತುರ್ವೇದೈಶ್ಚಾರ್ತತ್ರಾಣಪರಾಯಣಾಃ ||

ಟೀ || ಯಲೈನಾರದಮುನಿಯೇ ನಿನಗೆ ಸಮಾನರಾದಂಥ, ಮಹಾಪುರುಷರಾದಂಥ, ಬಿಡಲ್ಪಟ್ಟ ಇಚ್ಛೆಯುಳ್ಳಂಥ, ಪಾಪರಹಿತರಾದಂಥ, ಅನ್ಯರುಗಳಿಗೆ ಉಪಕಾರ ಮಾಡುವಲ್ಲಿ ಆಸಕ್ತವಾದ ಮನಸ್ಸುಳ್ಳಂಥ ಪರಿಶುದ್ಧವಾದ ನಡತೆಯುಳ್ಳಂಥ, ಅನ್ಯರ ವಿಪತ್ತುಗಳೆಂಬ ಅರಳೆ ಸುಡುವದಕ್ಕೆ ಅಗ್ನಿರೂಪವಾದ ಬುದ್ಧಿಯುಳ್ಳಂಥ, ವ್ಯಾಸ ಮೊದಲಾದ ಮಹಾಮುನಿಗಳಾದೊಡೆ ಸ್ಮರಿಸತಕ್ಕವರೆಂದೂ ಪ್ರಶಸ್ತವಾದ ವ್ರತವನುಳ್ಳವರೆಂದೂ, ದೀನರನ್ನು ರಕ್ಷಿಸುವಲ್ಲಿ ತತ್ಪರರೆಂದೂ ನಾಲ್ಕು ವೇದಗಳಿಂದ ಹೊಗಳಲ್ಪಡುತ್ತಿದ್ದಾರೆ.

ಪುನ್ನಾಮ್ನೋ ನರಕಾತ್ತ್ರಾತಾ ಪುತ್ರಏವ ನಚಾಪರಃ ।
ಪಿತೃಣಾಮೃಣನಿರ್ಮೋಕ್ಷ ದಕ್ಷಃ ಪುತ್ರಃ ಪ್ರಕೀರ್ತಿತಃ ॥

ಟೀ ॥ ಪುತ್ರನೆಂದರೆ ಪುತ್ ಎಂಬ ಹೆಸರಿನ ನರಕದ ದೆಸೆಯಿಂದ ದಾಟಿಸುವವನು. ಪುತ್ರನಿಂದಲ್ಲದೆ ಮತ್ತೊಬ್ಬನಿಂದ ಈ ನರಕವು ದಾಟುವ ದಕ್ಕಾಗದು. ಪುತ್ರನು ಪಿತೃಗಳ ಋಣಗಳಿಂದ ಬಿಡಿಸುವದರಲ್ಲಿ ಸಮರ್ಥ ನೆಂದು ಹೇಳಲ್ಪಟ್ಟಿರುವನು. ಅದುಕಾರಣದಿಂದೆ ಪುತ್ರನೇ ಸದ್ಗತಿಪ್ರದ ನೆಂಬುದರ್ಥ.

ಬ್ರಹ್ಮರ್ಷೆ ಭಾಗ್ಯ ವಿಹೀನಾಯಾಃ ನಜಾತೋ ಮಮ ಪುತ್ರಕಃ ॥
ಪುತ್ರಹೀನಾ ಭವೇನ್ನಾರೀ ವಿಧವಾಸದೃಶೀ ಮುನೇ ।
ವಂಧ್ಯಾತ್ವಂಹಿ ಮಹಾದುಃಖಂ ನಾರೀಣಾಂ ಮುನಿಪುಂಗವ ॥

ಟೀ ॥ ಬ್ರಹ್ಮಜ್ಞಾನಿಯಾದ ಋಷಿಗಳೊಳಗೆ ಶ್ರೇಷ್ಠನಾದ ಎಲೈ ನಾರದನೇ ಕೇಳು ಪುಣ್ಯಹೀನಳಾದ ನನಗೆ ಪುತ್ರನು ಹುಟ್ಟಲಿಲ್ಲ. ಪುತ್ರನಂ ಪಡೆಯದವಳು ವಿಧವೆಗೆ ಸಮಾನಳೆನಿಸುವಳು. ಆವುದಾನೊಂದು ಕಾರ ಣದ ದೆಸೆಯಿಂದ ಸ್ತ್ರೀಯರಿಗೆ ಬಂಜೆತನವೆಂಬುವದು ಮಹಾ ದುಃಖವಂ ಕೊಡುವದು.

ಸರ್ವವ್ರತಾನಿ ಚೀರ್ಣಾನಿ ಕಾಮಯಂತ್ಯಾಸುತಂಮಯಾ ।
ಧನಾನ್ಯಪಿ ಬಹೂನ್ಯೇವಂ ದತ್ತಾನಿ ದ್ವಿಜಪಾಣಿಷು ॥

ಟೀ ॥ ಎಲೈ ಮುನಿಯೇ ಪುತ್ರನನ್ನು ಪಡೆಯಬೇಕೆಂಬ ಬಯಕೆ ಯನ್ನುಳ್ಳ ನನ್ನಿಂದ ಸಮಸ್ತವಾದ ವ್ರತಗಳು ಆಚರಿಸಿ ವ್ಯರ್ಥವಾದವು. ಬ್ರಾಹ್ಮಣರ ಹಸ್ತಂಗಳಲ್ಲಿ ಅನೇಕ ದ್ರವ್ಯಗಳು ಕೊಡಲ್ಪಟ್ಟವು.

ತಥಾಪಿ ಪುತ್ರಲಾಭೋಮೆ ನಾಸ್ತಿ ಸಂಯಮಿನಾಂ ವರ ।
ಅತೋಭಾಗ್ಯವಿಹೀನಾಂ ಮಾಂ ಚಿಂತೈಕಾ ಬಾಧತೇ ಭೃಶಂ ॥

ಟೀ ॥ ಯತಿಶ್ರೇಷ್ಠನಾದ ಎಲೈ ಋಷಿಯೇ ಈ ಪ್ರಕಾರವಾಗಿ ಅನೇಕ ವ್ರತಗಳನ್ನು ಮಾಡಿದವಳಾದಾಗ್ಯೂ ನನಿಗೆ ಪುತ್ರಲಾಭವಾಗ ಲಿಲ್ಲ. ಅದು ಕಾರಣವಾಗಿ ಭಾಗ್ಯವಿಹೀನಳಾದ ನನ್ನನ್ನು ಪುತ್ರಾಪೇ ಕ್ಷೆಯ ಚಿಂತೆಯೊಂದು ವಿಶೇಷವಾಗಿ ಬಾಧಿಸುತ್ತಿರುವದು.

ಎವಮುಕ್ತಸ್ತಯಾದೇವ್ಯಾ ನಾರದಃಪ್ರತ್ಯಭಾಷತ ।
ಪೂರ್ವಜನ್ಮನಿ ಯಾನಾರೀ ರಜಸ್ಸಾಂಕರ್ಯಕಾರಿಣೀ ॥
ವಂಧ್ಯಾಭವತಿಸಾನಾರೀ ನಾತ್ರಕಾರ್ಯಾವಿಚಾರಣಾ ॥

ಟೀ ॥ ಈ ಪ್ರಕಾರವಾಗಿ ಮಾದಾಂಬೆಯಿಂದ ಹೇಳಲ್ಪಟ್ಟಂಥಾ ನಾರದಮುನಿಯು ಆ ಮಾದಾಂಬೆಗೆ ಅಪ್ಪಣೆಯನ್ನು ಕೊಡುತ್ತಿದ್ದಾನೆ. ಪೂರ್ವಜನ್ಮದಲ್ಲಿ ಯಾವ ಸ್ತ್ರೀಯಳು ರಜಸ್ವಲೆಯಾದ ಸಮಯದಲ್ಲಿಯೂ ಪಾಕವಂ ಮಾಡುವಳೋ ಆ ಸ್ತ್ರೀಯಳು ಬಂಜೆಯಾಗುವಳು. ಹೀಗೆಂಬ ರ್ಥದಲ್ಲಿ ಸಂಶಯವಿಲ್ಲ.

ದೇವಾರ್ಚನಾದಿ ಸರ್ವೇಷು ಪಿತೃಶ್ರಾದ್ಧಾದಿಕರ್ಮಸು ।
ನಿಯುಕ್ತಾ ಪಾಕಕರಣೇ ವನಿತಾ ವರವರ್ಣಿನೀ ॥
ಪಾಕಮಧ್ಯೇ ರಜೋವಿಷ್ಟಾ ಜ್ಞಾತ್ವಾ ದೋಷಂವಿಶೇಷತಃ ।
ಪಾಕವ್ಯೆಯರ್ಥ್ಯಶಂಕಾಯಾ ನಬಭಾಷೇತ ವ್ಯೆಯದಿ ॥
ತೇನ ದೋಷೇಣ ಮಹತಾ ಭವೇದ್ವಂಧ್ಯಾನಸಂಶಯಃ ।
ಜ್ಞಾತಮಾತ್ರಾದ್ಬಹಿರ್ಗಚ್ಛೇನ್ನಹಿ ವಂಧ್ಯೆತಿ ಸಾಸ್ಮೃತಾ ॥

ಟೀ ॥ ದೇವತಾರ್ಚನೆ ಮೊದಲಾದ ಸಕಲ ಕ್ರಿಯೆಗಳಲ್ಲಿಯಾಗಲಿ ಪಿತೃಶ್ರಾದ್ಧ ಮೊದಲಾದ ಕರ್ಮಗಳಲ್ಲಿಯಾಗಲಿ ಪಾಕಗಳಂ ಮಾಡುವಲ್ಲಿ ನೇಮಿಸಲ್ಪಟ್ಟವಳಾದ ಉತ್ತಮಸ್ತ್ರೀಯಳು ಪಾಕವಂ ಮಾಡುವಲ್ಲಿ ರಜಸ್ಸಿನಿಂದ ಕೂಡಲ್ಪಟ್ಟವಳಾಗಿ ಆ ರಜಸ್ಸಾಂಕರ್ಯ ದೋಷವನ್ನು ಚನ್ನಾಗಿ ತಿಳಿದು ತಾನು ಮಾಡಿದ ಪಾಕವು ವ್ಯರ್ಥವಾಗಿ ಹೋಗುವ ದೆಂಬ ಸಂದೇಹದಿಂದ ರಜಸ್ಸಾದೆನೆಂದು ಯಾರಿಗೂ ಹೇಳದೆ ಇರು ವಳೋ ಆ ಪಾಪಾಧಿಕ್ಯದಿಂದ ಆ ಸ್ತ್ರೀಯು ಬಂಜೆಯಾಗುವಳು. ಈ ಅರ್ಥದಲ್ಲಿ ಸಂಶಯವಿಲ್ಲ. ತಿಳಿದ ಕೂಡಲೇ ಒಂದನ್ನೂ ಮುಟ್ಟದೆ ಹೊರಗೆ ಬಂದರೆ ಅವಳು ಬಂಜೆಯಾಗುವುದಿಲ್ಲವೆಂದು ಹಿರಿಯರು ಹೇಳುತ್ತಾರೆ.

ಅತಸ್ತದ್ದೋಷಶಮನಂ ವ್ರತಮೇಕಂ ಬ್ರವೀಮಿ ತೇ ।
ತತ್ಪ್ರಭಾವಾತ್ಪುತ್ರಮೇಕಂ ಪ್ರಾಪ್ಸ್ಯಸಿ ತ್ವಂನಸಂಶಯಃ ॥

ಟೀ ॥ ಎಲೈ ಮಾದಾಂಬೆಯೇ ಕೇಳು ರಜಸ್ಸಾದ ಕಾಲದಲ್ಲಿ ಮಾಡಿದ ಕಾರ್ಯದಿಂದುಂಟಾದ ದೋಷವಂ ಪರಿಹರಿಸುವೆ. ಒಂದು ವ್ರತ

ವಂ ನಿನಗೆ ಹೇಳುವೆನು. ಆ ವ್ರತದ ಪ್ರಭಾವದ ದೆಸೆಯಿಂದ ನೀನು ಮುಂದೆ ಒಬ್ಬ ಸುಪುತ್ರನನ್ನು ಪಡೆಯುವಂಥಾವಳಾಗುತ್ತಿದ್ದೀಯೆ. ಈ ಅರ್ಥದಲ್ಲಿ ಸಂದೇಹವಿಲ್ಲವೆಂದು ನಾರದಮುನೀಶ್ವರನು ಹೇಳಿದನು.

ನಂದೀವ್ರತಮಿತಿಖ್ಯಾತಂತ್ರಿಷುಲೋಕೇಷು ವಿಶ್ರುತಂ |
ಸದಾಚಾರ್ಯೋಪದೇಶೇನ ವ್ರತಮೇತತ್ಸಮಾಚರೇತ್ ||

ಟೀ || ಮೂರುಲೋಕದಲ್ಲಿಯೂ ಪ್ರಖ್ಯಾತವಾದ ನಂದೀವ್ರತವೆಂಬ ಈ ವ್ರತವನ್ನು ಒಳ್ಳೇ ಆಚಾರ್ಯನ ಮುಖದಿಂದ ಉಪದೇಶವನ್ನು ಹೊಂದಿ ವಿಧಿವತ್ತಾಗಿ ಆಚರಿಸು. ನಿನಗೆ ಪುತ್ರಲಾಭವಾಗುವದಕ್ಕೆ ಸಂಶಯವಿಲ್ಲ.

ಮಾದಾಂಬಾಪಿ ಮಹಾಭಾಗಾ ಪ್ರತ್ಯುವಾಚ ಮುನಿಂತತಃ |
ಭೋಭೋ ಬ್ರಹ್ಮನ್ಮಹಾಭಾಗ ಪರಾರ್ಥೈಕ ಪ್ರಯೋಜನ ||

ಟೀ || ಮಹಾಪುಣ್ಯವತಿಯಾದ ಮಾದಾಂಬೆಯಾದಡೆ ಆ ಮುನಿಯ ಉಪದೇಶಾನಂತರದಲ್ಲಿ ಆ ನಾರದನನ್ನು ಕುರಿತು ನುಡಿದಳು. ಮಹೈಶ್ವರ್ಯಸಂಪನ್ನನಾದ, ಪರರಿಗೆ ಉಪಕಾರಮಾಡುವದೇ ಮುಖ್ಯಪ್ರಯೋಜನವಾಗುಳ್ಳ ಎಲೈ ಬ್ರಹ್ಮಜ್ಞಾನಿಯೇ ನೀನು ನಮ್ಮ ಭಾಗ್ಯಾತಿಶಯದ ದೆಸೆಯಿಂದ ನಮಗೆ ಆಚಾರ್ಯತ್ವವನ್ನು ಹೊಂದಿದವನಾದೆಯಲ್ಲವೆ ?

ಇದಂಶರೀರಮಮಲಂ ಪ್ರಾಣಾನ್ಪ್ರಿಯತಮಾನಪಿ |
ಗೃಹಾನ್‌ಗೃಹಸ್ಥಿತಂ ದ್ರವ್ಯಂದಾಸ್ಯಾಮಿ ತವ ಸಂಯಮಿನ್ ||

ಟೀ || ಎಲೈ ಮುನಿಯೇ ನಿರ್ಮಲವಾದ ನನ್ನ ಈ ಶರೀರವನ್ನೂ ಪ್ರೀತಿಕರವಾದ ಪಂಚಪ್ರಾಣಗಳನ್ನೂ ಮನೆಗಳನ್ನೂ ಮನೆಯಲ್ಲಿರುವ ದ್ರವ್ಯವನ್ನೂ ನಿನಗೆ ಕೊಡುತ್ತಲಿಧ್ದೇನೆ.

ಕಿಂತದ್ವ್ರತಂತ್ವದುಕ್ತಂ ಯತ್ತಸ್ಯಕಾದೇವತಾಸ್ಮೃತಾ |
ಕಥಂಕಾರ್ಯಂ ಕಯಾಚೀರ್ಣಂಪೂರ್ವಂಸರ್ವಂವದಾಧುನಾ ||

ಟೀ || ಎಲೈ ಮುನಿಯೇ ನಿನ್ನಿಂದ ನಿರೂಪಿಸಲ್ಪಟ್ಟ ವ್ರತವು ಅದು ಎಂಥಾದ್ದು ? ಅದಕ್ಕೆ ಅಧಿದೇವತೆ ಯಾರು ? ಹ್ಯಾಗೆ ಮಾಡತಕ್ಕದ್ದು ? ಪೂರ್ವದಲ್ಲಿ ಯಾವಾಕೆಯಿಂದ ಈ ವ್ರತವು ಆಚರಿಸಲ್ಪಟ್ಟಿತು ? ಈ ಸಮಸ್ತವನ್ನು ಈ ನನಿಗೆ ಹೇಳು

(ನಾರದಃ)

ಮಾಘಕೃಷ್ಣಚತುರ್ದಶ್ಯಾಂವ್ರತಮೇತದುಪಕ್ರಮೇತ್ |
ಪ್ರಾತಸ್ಸ್ನಾತ್ವಾಶುಚಿರ್ಭೂತ್ವಾನತ್ವಾಶಿವಪದಾಂಬುಜೇ ||
ತ್ರಿಪುಂಡ್ರಯುಕ್ತ ನಿಟಿಲಾರಾಜತ್ಕುಂಕುಮಮಂಡಿತಾ |
ರುದ್ರಾಕ್ಷಮಾಲಾ ಭರಣಾ ಶಿವಧ್ಯಾನಪರಾಯಣಾ |
ಪ್ರಾತಶ್ಶಿವಾಲಯಂಗತ್ವಾ ಚಾನಿಷಿದ್ಧಂಶಿವಂಯಜೇತ್ ||

ಟೀ || ಎಲೈ ಮಾದಾಂಬೆಯೇ ಕೇಳು ಮಾಘಮಾಸದ ಕೃಷ್ಣ ಪಕ್ಷದ ಚತುರ್ದಶೀತಿಥಿಯಲ್ಲಿ ಈ ನಂದಿವ್ರತವು ಆಚರಿಸುವದಕ್ಕೆ ಉಪ ಕ್ರಮಿಸತಕ್ಕದ್ದು. ಆ ದಿವಸದಲ್ಲಿ ಭಾಗ್ಯವತಿಯಾದ ಸ್ತ್ರೀಯಳು ಪ್ರಾತಃಕಾ ಲದಲ್ಲಿ ನಂದಿಕೇಶ್ವರ ಸ್ಮರಣೆಯಿಂದೆದ್ದು ದೇಹಬಾಧಾನಿವೃತ್ತಿಯಂಮಾಡಿ ಕೊಂಡು ಶಿವಮಂತ್ರಂಗಳಿಂದ ನಿರ್ಮಲೋದಕದಲ್ಲಿ ಸ್ನಾನವಂಮಾಡಿ ದಿವ್ಯಾಂಬರಭೂಷಿತಳಾಗಿ ಶುದ್ಧಾಂಗಿಯಾಗಿ ಪರಮೇಶ್ವರನ ಪಾದಂಗ ಳನ್ನು ವಂದಿಸಿ ವಿಭೂತಿಯ ಮೂರು ರೇಖೆಗಳನ್ನು ಲಲಾಟದಲ್ಲಿ ಧರಿಸಿ ಪ್ರಕಾಶಿಸುವ ಕುಂಕುಮಾಲಂಕಾರವುಳ್ಳವಳಾಗಿ ರುದ್ರಾಕ್ಷಮಾಲೆಗಳ ಭೂಷಣವುಳ್ಳವಳಾಗಿ ಶಿವಧ್ಯಾನದಲ್ಲಿ ತತ್ಪರಳಾಗಿ ಪ್ರಾತಃಕಾಲದಲ್ಲಿ ಶಿವಾ ಲಯವನ್ನು ಕುರಿತು ಹೋಗಿ ನಿಸ್ಸಂಶಯವಾಗಿ ಪರಮೇಶ್ವರಸ್ವಾಮಿಯ ಪೂಜೆಯನ್ನು ಮಾಡತಕ್ಕದ್ದು.

ವೃಷಸ್ಯವೃಷಣಂಸ್ಪೃಷ್ಟ್ವಾಶೃಂಗಮಧ್ಯಾವಲೋಕನಂ |
ಸಪ್ತಜನ್ಮಕೃತಂಪಾಪಂತತ್ಕ್ಷಣಾದೇವನಶ್ಯತಿ ||

ಟೀ || ಆ ಶಿವದರ್ಶನವಾಗುವಲ್ಲಿ ವೃಷಭೇಶ್ವರನ ಅಂಡಗಳಂಮುಟ್ಟಿ ಆ ವೃಷಭೇಶ್ವರನ ಕೊಂಬುಗಳ ನಡುವೆ ಶಿವನಂ ನಿರೀಕ್ಷಣೆಮಾಡಲು ಏಳುಜನ್ಮದಲ್ಲಿ ಮಾಡಿದ ಪಾಪವು ಆ ಕ್ಷಣವೇ ನಾಶವಹುದು.

ರುದ್ರಸೂಕ್ತೈಃಪ್ರಶಸ್ತೈಶ್ಚ ವೇದತ್ರಿತಯವರ್ತಿಭಿಃ |
ಬೋಧಾಯನೋಕ್ತಮಾರ್ಗೇಣ ಶ್ರೀರುದ್ರೇಣಾಭಿಷೇಚಯೇತ್ ||

ಟೀ || ಪ್ರಶಸ್ತಗಳಾದಂಥ ಮೂರು ವೇದಗಳಲ್ಲಿ ವರ್ತಿಸುತ್ತಲಿರು ವಂಥ ಶ್ರೀ ರುದ್ರಪುರುಷಸೂಕ್ತ ಮಹಾಮಂತ್ರಗಳಿಂದಲೂ ಬೋಧಾಯ

ನೋಕ್ತೋಪನಿಷದ್ವಾಕ್ಯಪ್ರೋಕ್ತವಾದ ಮಾರ್ಗದಿಂದಲೂ ಪಂಚಬ್ರಹ್ಮ ಮಂತ್ರದಿಂದಲೂ ಶಿವಲಿಂಗಾಭಿಷೇಕವಂ ಮಾಡಬೇಕು.

ತತ್ಪುರಸ್ಥಂಚಶೈಲಾದಿಂಶಿವಭಕ್ತಾಗ್ರ್ಯಯಾಯಿನಂ |
ತೈಲೇನವೃಷಗಾಯತ್ರ್ಯಾಸರ್ವಾಂಗಂಪರಿಷೇಚಯೇತ್ ||

ಟೀ || ಲಿಂಗಾಭಿಷೇಕವಾದಮೇಲೆ ಲಿಂಗದಮುಂದೆ ಇರುವ ಶಿವಭಕ್ತರುಗಳಲ್ಲಿ ಶ್ರೇಷ್ಠನಾದಂಥಾ ನಂದೀಶ್ವರನನ್ನು ವೃಷಗಾಯತ್ರೀ ಮಂತ್ರಪಠನದಿಂದ ಸಕಲಾವಯವಗಳನ್ನು ತೈಲದಿಂದ ಚನ್ನಾಗಿ ಅಭಿಷೇಕಮಾಡಬೇಕು.

ಬಿಲ್ವಪತ್ರೈಃ ಪ್ರಶಸ್ತೈಶ್ಚ ಕುಸುಮೈರ್ವಿವಿಧೈರಪಿ ||
ನಂದಿನಂಪೂಜಯೇದ್ಭಕ್ತ್ಯಾಧೂಪದೀಪಪುರಸ್ಸರಂ ||

ಟೀ || ಶ್ರೇಷ್ಠವಾದ ಬಿಲ್ವ ಪತ್ರೆಗಳಿಂದಲೂ ನಾನಾಪ್ರಕಾರವಾದ ಪುಷ್ಪಗಳಿಂದಲೂ ಧೂಪದೀಪ ನೈವೇದ್ಯತಾಂಬೂಲಗಳಿಂದಲೂ ಸಾಂಗವಾಗಿ ಭಕ್ತಿಯಿಂದ ವೃಷಭೇಶ್ವರನ ಪೂಜೆಯಂಮಾಡಬೇಕು.

ತಸ್ಮಿನ್ದಿನೆ ವ್ಯತೀತೇತು ಪರೇದ್ಯುರ್ಬ್ರಾಹ್ಮಣಾನ್ಬಹೂನ್ |
ಶೈವಾನ್ ಪಾಶುಪತಾಚಾರಾನ್ ಭೋಜಯೇತ್ಪ್ರೀತಿಸಂಯುತಾ ||

ಟೀ || ಆದಿವಸದಲ್ಲಿ ಈಪ್ರಕಾರವಾಗಿ ವ್ರತವನ್ನಾಚರಿಸಿ ಮಾರಣೆ ದಿವಸದಲ್ಲಿ ಅನೇಕರಾದ ಶಿವಸಂಬಂಧಿಗಳಾದ ಪಶುಪತಿಸಂಬಂಧಿಯಾದ ಆಚಾರವುಳ್ಳ ಲಿಂಗಧಾರೀ ಬ್ರಾಹ್ಮಣರನ್ನು ಸಂತೋಷದೊಡನೆ ಭೋಜನ ಮಾಡಿಸಬೇಕು

ಮಾಸೇಮಾಸೇಪಿಕರ್ತವ್ಯಂ ವ್ರತಮೇವಂ ಶುಚಿಸ್ಮಿತೇ |
ಸಂವತ್ಸರತ್ರಯೇಪೂರ್ಣೇ ಶಿವರಾತ್ರ್ಯಾಂವರಾನನೆ ||

ಟೀ || ನಿರ್ಮಲವಾದ ನಗೆಯೊಡನೆ ಕೂಡಿದ ಶ್ರೇಷ್ಠವಾದ ಮುಖವುಳ್ಳ ಎಲೈ ಮಾದಾಂಬೆಯೇ ಮೂರುವರ್ಷಗಳು ಪೂರ್ತಿಯಾಗುವವರಿಗೂ ಮಾಸಮಾಸದಲ್ಲಿಯೂ ಈ ವ್ರತವನ್ನಾಚರಿಸಿ ಅನಂತರ ಶಿವರಾತ್ರಿಯಲ್ಲಿ

ಶಿವಸ್ಯಪೂಜನಂಕೃತ್ವಾ ನಂದಿನಂ ಪರಿಪೂಜಯೇತ್ |
ನಂದಿನಸ್ಸ್ವರ್ಣಶೃಂಗಾದಿ ಕಿಂಕಿಣೀಂಸ್ವರ್ಣನಿರ್ಮಿತಾಂ ||

ಆಸ್ತ್ರಾಪದಾರ್ಞ ಖುರಾರ್ಞ ರಮ್ಯಾರ್ಞ ನಿಯಮ್ಯ ನಿಯಮಾನ್ವಿತಾ ||
ಅಲಂಕೃತ್ವಾದಿವ್ಯವಸ್ತ್ರೈ ರ್ಭೂಷಣೈರ್ನಂದಿಕೇಶ್ವರಂ |
ವೃಷಭೇಂದ್ರಧ್ಯಾನಯುಕ್ತಾ ಭಕ್ತಿತಃಪರಿಪೂಜಯೇತ್ ||
ಆಚಾರ್ಯಂಪೂಜಯೇತ್ಪಶ್ಚಾತ್ ಬ್ರಾಹ್ಮಣಾರ್ಞ ಲಿಂಗಧಾರಿಣಃ ||
ಏಕಾದಶವದೇದ್ಭಕ್ತ್ಯಾ ಋತ್ವಿಜೋವೇದಪಾರಗಾರ್ಞ ||

ಟೀ || ಶಿವಪೂಜೆಮಾಡಿದ ನಂತರದಲ್ಲಿ ನಂದಿಕೇಶ್ವರನಿಗೆ ಅಷ್ಟವಿಧ ಪೂಜೆಮಾಡಬೇಕು. ಈ ಪ್ರಕಾರವಾಗಿ ಮುವ್ವತ್ತಾರು ತಿಂಗಳು ವ್ರತವ ನ್ನಾಚರಿಸಿದಮೇಲೆ ಆಚಾರ್ಯರಿಂದ ನಿರೂಪಿತವಾದ ನಿಯಮಂಗಳಿಂದ ಕೂಡಿದ ಸ್ತ್ರೀಯಳು ನಂದೀಶ್ವರನಿಗೆ ಚಿನ್ನದಕೊಂಬು ಅಣಸುಗಳನ್ನೂ ಗೆಜ್ಜೆಸರ ಮೊದಲಾದ ಭೂಷಣಗಳನ್ನೂ ಪಾದದ ಗೊರಸುಗಳನ್ನೂ ಮಾಡಿಸಿ, ಒಳ್ಳೇ ವಸ್ತ್ರಗಳಿಂದಲೂ ಆಭರಣಗಳಿಂದಲೂ ಅಲಂಕರಿಸಿ ನಂದೀಶಧ್ಯಾನಪೂರ್ವಕವಾಗಿ ಭಕ್ತಿಯಿಂದ ಪೂಜಿಸಬೇಕು. ಆಮೇಲೆ ಲಿಂಗಧಾರಕರಾದ ವೇದಗಳ ಪಾರವನ್ನೈದಿದ ಆಚಾರ್ಯರಾದ ಹನ್ನೊಂದು ಜನ ಭಕ್ತಗಣಂಗಳನ್ನು ಕರೆಯಬೇಕು.

ಶೈವಾಗ್ನಿಂಜನಯಿತ್ವಾತು ಯಥಾವನ್ನಿಯಮಾನ್ವಿತಾ |
ಸಹಸ್ರಂವೃಷಗಾಯತ್ರ್ಯಾ ಹುನೇದಾಜ್ಯೇನಸುಂದರಿ ||

ಟೀ || ಸುಂದರವಾದ ಅಂಗವುಳ್ಳ ಎಲೈ ಮಾದಾಂಬೆಯೇ ಕೇಳು ಯಥಾಪ್ರಕಾರವಾದ ನಿತ್ಯವ್ರತಗಳೊಡನೆ ಕೂಡಿದಂಥಾವಳಾಗಿ ವಿಧ್ಯು ಕ್ತಪ್ರಕಾರವಾಗಿ ಶಿವಸಂಬಂಧಿಯಾದ ರುದ್ರಾಗ್ನಿಯನ್ನು ಉಂಟುಮಾ ಡಿಸಿ ವೃಷಗಾಯತ್ರೀ ಮಂತ್ರದಿಂದ ಸಾವಿರಬಾರಿ ಆಜ್ಯದಿಂದ ಹೋಮ ಮಾಡಬೇಕು.

ಪಯಸಾಚಹುನೇದೇವಂ ಚಣಕೈಶ್ಚ ತಥಾಹುನೇತ್ |
ಸಮಿದ್ಭಿಶ್ಚ ಹುನೇದೇವಂ ಬಿಲ್ವಪತ್ರೈಸ್ತದಾಹುನೇತ್ ||

ಟೀ || ಆ ರುದ್ರಾಗ್ನಿಯನ್ನು ಹುಟ್ಟಿಸಿ, ಈ ಪ್ರಕಾರವಾಗಿ ವೃಷ ಗಾಯತ್ರೀ ಮಂತ್ರದಿಂದ ಸಹಸ್ರವೇಳೆ ಕ್ಷೀರದಿಂದಲೂ ಕಡಲೆಯಿಂದಲೂ ಸಮಿತ್ತುಗಳಿಂದಲೂ ಬಿಲ್ವಪತ್ರೆಗಳಿಂದಲೂ ಹವನಮಾಡಬೇಕು.

ತಿಲ್ಯೆರಪೂಪಕ್ಕೆಶ್ಚೈವ ಲಾಜ್ಯೆಗೋಧೂಮಕ್ಯೆಸ್ತಥಾ |
ಮುದ್ಗೈ ರ್ಮಾಷೈಃ ಕುಳಿತ್ಥೈಶ್ಚ ಪ್ರತ್ಯೇಕಂಚಸಹಸ್ರಶಃ ||

ಟೀ || ಎಲ್ಯೆ ಮಾದಾಂಬೆಯೇ ಈಮೇರೆಗೆ ಎಳ್ಳುಗಳಿಂದಲೂ ಕಡುಬುಗಳಿಂದಲೂ ಭತ್ತದರಳುಗಳಿಂದಲೂ ಗೋದುವೆಗಳಿಂದಲೂ ಹೆಸರಿನಿಂದಲೂ ಉದ್ದಿನಿಂದಲೂ ಹುರಳಿಯಿಂದಲೂ ಬೇರೆಬೇರೆ ಸಾವಿರಬಾರಿ ಹೋಮ ಮಾಡಬೇಕು.

ಏವಂಕೃತ್ವಾತತಃಕ್ಷೀರೈಃ ಸಹಸ್ರಂತರ್ಪಣಂ ಚರೇತ್ |
ಬ್ರಾಹ್ಮಣಾನ್ ಭೋಜಯೇತ್ಪಶ್ಚಾತ್ ದಕ್ಷಿಣಾದಾನಪೂರ್ವಕಂ ||

ಟೀ || ಈಪ್ರಕಾರವಾಗಿ ಮಾಡಿ ಆಮೇಲೆ ಸಹಸ್ರಕ್ಷೀರ ತರ್ಪಣಂಗಳಂ ಮಾಡತಕ್ಕದ್ದು. ಆಮೇಲೆ ದಕ್ಷಿಣೆಯನ್ನೂ ಗೋದಾನ ಮೊದಲಾದ ದಾನವನ್ನೂ ಕೊಟ್ಟು ಲಿಂಗಧಾರಕರಾದ ಬ್ರಾಹ್ಮಣರಿಗೆ ಭೋಜನವಂ ಮಾಡಿಸಬೇಕು.

ತತಃಸ್ವಯಂಚಭುಂಜೀತ ಮಿತ್ರಬಂಧು ಸಹೋದರೈಃ |
ಏತದ್ವ್ರತೇ ಕೃತೇದೇವಿ ತವಪುತ್ರೋಜನಿಷ್ಯತಿ ||

ಟೀ || ಎಲ್ಯೆ ಮಾದಾಂಬೆಯೇ ಭೋಜನಾದಿಗಳಿಂದ ಸಂತೋಷಪಡಿಸಿ ತಾನು ತನ್ನ ನೆಂಟರು ಆಪ್ತರು ಕೂಡಹುಟ್ಟಿದವರೊಡಗೂಡಿ ಊಟವನ್ನು ಮಾಡಬೇಕು. ಈಪ್ರಕಾರವಾಗಿ ಈ ವ್ರತವನ್ನು ಮಾಡಲು ನಿನಗೆ ಪುತ್ರನು ಹುಟ್ಟುವನು.

ಏವಂಕೃತ್ವಾದಿತಿಃಪೂರ್ವಂ ಪುತ್ರಮಾಪ ಸುರೇಶ್ವರಂ |
ನಂದಿವ್ರತಪ್ರಭಾವೇನ ಚತುರಾಶ್ರಮವರ್ಣಕಾಃ ||
ಸತ್ಪುತ್ರಾನ್ಪ್ರಾಪುರುರ್ವ್ಯಾಂಚ ಕೇಚಿತ್ಸದ್ಗತಿಮಾಪಿರೆ |
ಸ್ತ್ರಿಯಶ್ಚ ವಿಧವಾಶ್ಚಾಪಿ ಸತೀತ್ವಂಪ್ರಾಪ್ನುವಂತಿತಾಃ ||
ಕಾಶ್ಚಿನ್ಮೃತಪತಿ ಪ್ರಾಣಲಭ್ಧಾಸ್ಸಂತಿಮಹೀತಲೆ |
ಏವಮುಕ್ತ್ವಾಮುನಿವರಃ ಕಾಮಚಾರೋಜಗಾಮಸಃ ||

ಟೀ|| ಎಲ್ಯೆ ಮಾದಾಂಬೆಯೇ ಕೇಳು ಪೂರ್ವದಲ್ಲಿ ಅದಿತಿಯೆಂಬಾಕೆಯು ಈಪ್ರಕಾರವಾಗಿ ನಂದಿಕೇಶ್ವರನ ವ್ರತವನ್ನುಮಾಡಿ ದೇವೇಂದ್ರನೆಂಬ ಕುಮಾರನನ್ನು ಪಡೆದಳು ಈವ್ರತಮಹಿಮೆಯಿಂದ ಭೂಮಿಯಲ್ಲಿ

ಬ್ರಾಹ್ಮಣಾದಿ ನಾಲ್ಕು ಜಾತಿಯವರು ಒಳ್ಳೇ ಮಕ್ಕಳನ್ನು ಪಡೆದರು. ಬ್ರಹ್ಮಚರ್ಯಾದಿ ನಾಲ್ಕು ಆಶ್ರಮದವರು ಮೋಕ್ಷವನ್ನು ಹೊಂದಿದರು. ಸುಮಂಗಲೆಯರೂ, ವಿಧವೆಯರೂ, ಪಾತಿವ್ರತ್ಯವನ್ನು ಹೊಂದುವರು. ಈ ಲೋಕದಲ್ಲಿ ಕೆಲವರು ಈ ವ್ರತಪ್ರಭಾವದಿಂದ ಸತ್ತುಹೋದ ಗಂಡನ ಪ್ರಾಣವನ್ನು ಪಡೆದಿದ್ದಾರೆ. ಎಂದು ಮುನಿಶ್ರೇಷ್ಠನಾದ ನಾರದನು ಈ ಪ್ರಕಾರವಾಗಿ ಹೇಳಿ ಕಾಮಚಾರನಾಗಿ ಸ್ವರ್ಗಕ್ಕೆ ಹೋದನು.

ಮಾದಾಂಬಾಪಿವ್ರತಪರಾ ತಸ್ಥೌ ಸ್ವಭವನಾಂತರೆ |
ಏತಸ್ಮಿನ್ನಂತರೇ ನಂದೀಸ್ಸಯಂತೂರ್ಣ ಮುಪಾಗತಃ ||

ಟೀ|| ಎಲೈ ಅಗಸ್ತ್ಯಮುನಿಯೇ ಆ ನಾರದನ ಬೊಧೆಯಿಂದ ಮಾದಾಂಬೆಯು ವ್ರತಪರಳಾಗಿ ತನ್ನ ಮನೆಯಲ್ಲಿ ಇರುತ್ತಿರುವಾಗ ಶಿವಾಜ್ಞೆಯಿಂದ ಆಕೆಯ ವ್ರತಪಾಲನಾರ್ಥವಾಗಿ ನಂದಿಕೇಶ್ವರನು ತಾನು ಜಾಗ್ರತೆಯಿಂದ ಮಾದಾಂಬೆಯ ಗೃಹವನ್ನು ಪ್ರವೇಶಿಸಿದನು.

ಮಾದಾಂಬಾಗರ್ಭದೇಶಂತಂ ಪ್ರವಿವೇಶಾಥ ಜನ್ಮನೆ |
ತದಾ ದೌಹೃದ ಚಿಹ್ನಾನಿ ತಸ್ಯಾಸ್ಸಂಜಜ್ಞಿರೇ ಭೃಶಂ ||
ವಕ್ಷ್ಯೇತದ್ಗರ್ಭಚಿಹ್ನಾನಿ ಶ್ರುಣುಕುಂಭಜ ಸಾದರಂ |

ಟೀ|| ಎಲೈ ಅಗಸ್ತ್ಯನೇ ಕೇಳು ಅನಂತರದಲ್ಲಿ ಆ ನಂದೀಶ್ವರನು ಆ ಮಾದಾಂಬೆಯ ಗರ್ಭ ಸ್ಥಳವನ್ನು ತಾನು ಪುತ್ರನಾಗುವದಕ್ಕೋಸ್ಕರ ಯಾವಾಗ ಪ್ರವೇಶಮಾಡಿದನೋ ಆ ದಿವಸ ಮೊದಲಾಗಿ ಆ ಮಾದಾಂಬೆಗೆ ಗರ್ಭ ಚಿಹ್ನೆಗಳು ವಿಶೇಷವಾಗಿ ಹುಟ್ಟಿದವು. ಎಲೈ ಅಗಸ್ತ್ಯನೇ ಆ ಗರ್ಭ ಚಿಹ್ನೆಗಳನ್ನು ಹೇಳುವೆನು. ಪ್ರೀತಿಯಿಂದ ಕೇಳು.

ಭವಿನಾ ನಾನ್ನ ಭೋಗಸ್ಸ್ಯಾದ್ಗರ್ಭಸ್ಥಸ್ಯಶಿಶೋರಿವ |
ಶೀಲ್ಯಾಚಚಿಂತಯಾನಿತ್ಯಂ ವಮತೆ ವರವರ್ಣಿನೀ ||

ಟೀ|| ಮಾದಾಂಬೆಯು ತನ್ನ ಗರ್ಭದಲ್ಲಿದ್ದ ಶಿಶುವಿಗೆ ಅನ್ನಭೋಗವು ಲಿಂಗವಿಲ್ಲದ ಜನದಿಂದ ಉಂಟಾಗಬಾರದು ಎಂಬ ಸದಾಚಾರ ಚಿಂತೆಯಿಂದಲೋ ಎಂಬಂತೆ ನಿರಂತರವು ವಮನ ಮಾಡಿದಳು.

ಅಮೃತಾಂಶೋರ್ನಿವಾಸೇನ ಪುತ್ರಸ್ಯ ಜಠರೇತಥಾ |
ಕ್ಷುಧಾ ನ ಜಾಯತೇನೂನಂತಸ್ಯಾಃ ಕುಂಭಜಸರ್ವದಾ ||

ಟೀ|| ಎಲೇ ಅಗಸ್ತ್ಯಮುನಿಯೇ ಅಮೃತ ಕಾಂತಿಯುಳ್ಳಂಥಾ ಪುತ್ರನು ಕುಕ್ಷಿಯಲ್ಲಿ ವಾಸಿಸುವ ಕಾರಣದಿಂದ ಆ ಮಾದಾಂಬೆಗೆ ಹಸಿವು ಹುಟ್ಟಲಿಲ್ಲವು. ಅಮೃತ ಪಾನವನ್ನು ಮಾಡಿದವರಿಗೆ ಹ್ಯಾಗೋ ಹಾಗೆ ಆಕೆಗೆ ಅನ್ಯ ಪದಾರ್ಥಗಳಲ್ಲಿ ಇಚ್ಛೆಯು ಉಂಟಾಗಲಿಲ್ಲ. ನಿಶ್ಚಯವು.

ಜಲಜಾಕ್ಷ್ಯಾಗರ್ಭದೇಶೇಸದ್ಭಕ್ತಿರುಚಿರ್ಮಾ ಶಿಶುಃ |
ಸ್ಥಿತಸ್ತೇನೈವರುಚಯೊ ನಜಾಯಂತೇನ್ಯವಸ್ತುಷು ||

ಟೀ|| ಎಲೈ ಅಗಸ್ತ್ಯನೇ ತಾವರೆಯ ಎಸಳಿನ ಹಾಗೆ ನೇತ್ರಗಳುಳ್ಳ ಆ ಮಾದಾಂಬೆಗೆ ತನ್ನ ಗರ್ಭ ಪ್ರದೇಶದಲ್ಲಿ ಶಿವಭಕ್ತಿಯಲ್ಲಿ ಪ್ರೀತಿಯುಳ್ಳ ಶಿಶುವು ನೆಲಸಿದ ಕಾರಣದಿಂದ ಶಿವಾನರ್ಪಿತವಾದ ಪದಾರ್ಥಗಳಲ್ಲಿ ಕಾಂಕ್ಷೆಗಳು ಹುಟ್ಟಲೇ ಇಲ್ಲ.

ಪಾಂಡುರಾಗಸ್ಯದೇಹಸ್ಯ ಮೂರ್ತೇಸ್ಥಿತ್ಯೈವ ಪಾಂಡುತಾ |
ಶರೀರೇಕಲಿತಾತಸ್ಯಾಃ ಮಾದಾಂಬಾಯಾಸ್ಸಮಂತತಃ ||

ಟೀ|| ಎಲೈ ಅಗಸ್ತ್ಯನೇ ಧವಳವಾದ ಶರೀರವುಳ್ಳಂಥ ದಿವ್ಯಕಾಂತಿಸ್ವರೂಪನಾದ ನಂದೀಶ್ವರನ ಶರೀರಕ್ಕೆ ಸ್ಥಾನವಾಗಿರುವದರಿಂದ ಪ್ರಕಾಶಮಾನವಾದ ಆ ಮಾದಾಂಬೆಯ ಶರೀರದಲ್ಲಿ ಧಾವಳ್ಯ ವುಂಟಾಯಿತೋ ಎಂಬಹಾಗಿತ್ತು.

ಜೃಂಭತೇವಕ್ತ್ರವಿಕೃತೀಃ ಕುರ್ವಂತೀವ ಸುತಾಗಮೆ |
ಶಿವಮೂರ್ತಿವಶೇನೈವ ಯೋಗನಿದ್ರೇವ ಶಾಂಭವೀ |
ನಿದ್ರಾಂತಾಮಾಪಸತತಂ ಮಾದಾಂಬಾ ವರವರ್ಣಿನೀಂ ||

ಟೀ || ಮಾದಾಂಬೆಯು ಪುತ್ರಾಗಮನ ಕಾಲದಲ್ಲಿ ಮುಖವಿಕಾರಗಳನ್ನು ಮಾಡುತ್ತಿದ್ದಾಳೋ ಎಂಬ ಹಾಗೆ ಆಕಳಿಸುತ್ತಿದ್ದಾಳೆ. ಆ ಮೇರೆ ಆ ಮಾದಾಂಬೆಯನ್ನು ಶಿವಮೂರ್ತಿಯಾದ ನಂದೀಶ್ವರನ ದೆಸೆಯಿಂದ ಶಂಭುಸಂಬಂಧವಾದ ಯೋಗನಿದ್ರೆಯುಂಟಾಯಿತೋ ಎಂಬ ಹಾಗೆ ನಿದ್ರೆಯು ಸರ್ವಕಾಲದಲ್ಲಿಯೂ ಹೊಂದಿತು.

ಗರ್ಭಸ್ಥನೀಲಕಂಠಸ್ಯ ಕಂಠಸಂಸ್ಥಿತನೀಲಿಮಾ |
ಮಾದಾಂಬಾಯಾಃಕುಚದ್ವಂದ್ವೇಚಕಾರಾವಾಸಮುದ್ಧೃತಂ ||

ಟೀ || ಗರ್ಭದಲ್ಲಿರುವ ಕಪ್ಪುಕಂಠವುಳ್ಳ ಪರಮೇಶ್ವರನ ಅವತಾರಿಯಾದ ವೃಷಭೇಶ್ವರನ ಕಂಠಪ್ರದೇಶದಲ್ಲಿ ಇರುವ ಕಪ್ಪುಬಣ್ಣವು ಮಾದಾಂಬೆಯ ಕುಚದ್ವಂದ್ವದಲ್ಲಿ ಆಶ್ರಯವನ್ನು ಮಾಡಿತೋ ಏನೊ ಆಶ್ಚರ್ಯ.

ನೀಲಚೂಚಕ ಸಂಶೋಭಿ ಪೀನೋತ್ತುಂಗಸ್ತನದ್ವಯಂ |
ಭ್ರಮರಾ ಕ್ರಾಂತಕಮಲ ಕೋಶದ್ವಂದ್ವಮಿವಾಬಭೌ ||

ಟೀ || ಕಪ್ಪಾದ ಚೂಚುಕಂಗಳಿಂದ ಚನ್ನಾಗಿ ಪ್ರಕಾಶಿಸುವಂಥ ಸ್ಥೂಲವಾಗಿಯೂ ಉನ್ನತವಾಗಿಯೂ ಇರುವ ಕುಚದ್ವಯವು ಭ್ರಮರಗಳಿಂದ ಮುಸುಕಲ್ಪಟ್ಟ ತಾವರೆಮೊಗ್ಗುಗಳೋಪಾದಿಯಲ್ಲಿ ಪ್ರಕಾಶವಾದವು.

ಅಪರಿಚ್ಛಿನ್ನ ದೇವೇಶೋ ಯಥಾಗರ್ಭಮವಾಪಸಃ |
ತಥಾಸರ್ವಜನಾದೃಶ್ಯಂ ಮಧ್ಯಂ ತತ್ಕಾಜ ಸೂಕ್ಷ್ಮತಾಂ ||

ಟೀ || ಅಖಂಡಿತನಾದ ಪರಮೇಶ್ವರರೂಪನಾದ ಆ ವೃಷಭೇಶ್ವರನು ಆ ಮಾದಾಂಬೆಯ ಗರ್ಭವನ್ನು ಹ್ಯಾಗೆ ಪ್ರವೇಶಿಸಿದನೋ ಹಾಗೆ ಜನರಿಗೆ ಅಗೋಚರವಾದ ನಡುವು ಸೂಕ್ಷ್ಮತ್ವವಂ ಬಿಟ್ಟಂಥಾದ್ದಾಯಿತು.

ನೇತ್ರಪ್ರಾಂತೌಚಮಸೃಣೌಮಿಲಿತಾಕ್ಷಿಪ್ರವೇಶತಃ |
ಮಾದಾಂಬಾಯಾಮಹಾದೇವ್ಯಾಃಕಿಂಚನ್ನಿಮ್ನೌ ಬಭೂವತುಃ ||

ಟೀ || ದಿವ್ಯಕಾಂತಿಸ್ವರೂಪಳಾದ ಮಾದಾಂಬೆಯ ನುಣುಪಾದ ಕಡೆಗಣ್ಣುಗಳು ಮುಚ್ಚಲ್ಪಟ್ಟ ಗುಡ್ಡೆಗಳು ಒಳಗೆ ಪ್ರವೇಶಿಸುವದರಿಂದ ಸ್ವಲ್ಪ ಕುಳಿಯಾಗಿ ತಗ್ಗಿದಂಥಾವಾದವು.

ಯೋಗಿಹಂಸ ಪ್ರವೇಶೇನಮಂದಯಾನಾ ಬಭೂವಸಾ |
ನಿಸ್ಪೃಹಸ್ಯನಿವಾಸೇನ ಮಾದಾಂಬಾಯಾ ಸ್ತದಾಮುನೆ |
ಅರತಿಶ್ಚಾಪಿಸಂಜಜ್ಞೆ ಸರ್ವೇಷ್ವಪಿಚವಸ್ತುಷು ||

ಟೀ || ಎಲೈ ಅಗಸ್ತ್ಯನೇ ಕೇಳು. ಆ ಮಾದಾಂಬೆಯು ಅಷ್ಟಾಂಗಯೋಗವನ್ನುಳ್ಳ ವೃಷಭೇಶ್ವರನೆಂಬ ಹಂಸಪ್ರವೇಶದಿಂದ ಮಂದಗಮನವುಳ್ಳಂಥಾವಳಾದಳು. ನಿಸ್ಪೃಹನಾದ ವೃಷಭೇಶ್ವರನಿಗೆ ಸ್ಥಾನವಾದವಳಾದ್ದರಿಂದ ಆಗ ಆ ಮಾದಾಂಬೆಗೆ ಸಮಸ್ತ ಪದಾರ್ಥಗಳಲ್ಲಿಯೂ ಅರುಚಿವುಂಟಾಯಿತು.

ಏವಮಾದೀನಿ ಚಿಹ್ನಾನಿ ಮಾದಾಂಬಾಯಾಶ್ಚ ಜಜ್ಞಿರೆ |
ಸರ್ವಂಶ್ರುತ್ವಾಸಖೀವಾಕ್ಯಂ ತತ್ಪತಿರ್ಮುಮುದಮಾಯಯೌ ||

ಟೀ || ಎಲೈ ಅಗಸ್ತ್ಯನೇ ಈ ಪ್ರಕಾರವಾಗಿ ಮಾದಾಂಬೆಗೆ ಈ ಮೊದಲಾದ ಚಿಹ್ನೆಗಳು ಹುಟ್ಟಿದವು. ಆವಾಗ ಮಾದಾಂಬೆಯ ವಲ್ಲಭನಾದ ಮಾದಿರಾಜನು ಸಖಿಯರ ಮಾತಿನಿಂದ ಸಮಸ್ತ ಗರ್ಭಚಿಹ್ನೆಯನ್ನು ಕೇಳಿ ಸಂತೋಷವನ್ನೈದಿದನು.

ಸಂವತ್ಸರತ್ರಯಂಜಾತಂ ನಜಾತಸ್ತು ತನೂಭವಃ |
ನಂದೀಶ್ವರಸ್ತದುದರೇ ಯಥಾಕೈಲಾಸಮಂದಿರೆ ||
ಅನುಧ್ಯಾಯನ್ಮಹಾದೇವಂ ಸುಖೇನೈವಾವಸನ್ಮುನೇ ||

ಟೀ || ಎಲೈ ಅಗಸ್ತ್ಯನೇ ಆ ಮಾದಾಂಬೆಯ ಗರ್ಭದಲ್ಲಿ ನಂದಿಶ್ವರನು ಕೈಲಾಸವೆಂಬ ಮನೆಯಲ್ಲಿ ಹ್ಯಾಗೆ ಇದ್ದನೋ ಹಾಗೆ ಶಿವಯೋಗಾರೂಢನಾಗಿ ಪರಮೇಶ್ವರನನ್ನು ಧ್ಯಾನಿಸಿಕೊಂಡು ಸೌಖ್ಯದಿಂದಿದ್ದನು.

ಕದಾಚಿದ್ಗರ್ಭಭಾರೇಣ ದುಃಖಿತಾಸಾಪ್ಯಚಿಂತಯತ್ ||

ಟೀ || ಆ ಮಾದಾಂಬೆಯು ಒಂದಾನೊಂದು ದಿವಸದಲ್ಲಿ ಗರ್ಭದ ಹೊರೆಯಿಂದ ದುಃಖವುಳ್ಳವಳಾಗಿ ಆಲೋಚಿಸಿದಳು.

ಅಧುನಾನಾರದವಚೊಮತ್ಪ್ರಾಣಾಂತಕರಂ ಕಿಮು |
ವ್ರತಲೋಪಸ್ತುಜಾತಃ ಕಿಂಮಮಭಾಗ್ಯವಿಪರ್ಯಯಾತ್ ||

ಟೀ || ನಾರದನು ಬಂದುಹೇಳಿದ ಮಾತು ಈಗ ನನ್ನ ಪ್ರಾಣಗಳನ್ನು ನಾಶಮಾಡುವದೋ ಏನೋ ನನ್ನ ಅದೃಷ್ಟದ ವ್ಯತ್ಯಾಸದದೆಸೆಯಿಂದ ವ್ರತಲೋಪವಾಯಿತೋ ಏನೋ ಎಂದು ಮಾದಾಂಬೆಯು ಚಿಂತಿಸಿದಳು.

ಅಂತರ್ವತ್ನೀಕರ್ಕಟೀವಪ್ರಾಣಾಂಸ್ತ್ಯಕ್ಷ್ಯಾಮಿಕಿಂನ್ವಹಂ |
ಸಂಬಾಧ ಹೇತುಸ್ಸಂಜಾತಃ ಪ್ರಸಾದಾತ್ಪರಮೇಷ್ಠಿನಃ ||

ಟೀ || ಮತ್ತೆ ಆ ಮಾದಾಂಬೆಯು ಗರ್ಭಿಣಿಯಾದ ಯೇಡಿಯ ಹಾಗೆ ಪ್ರಾಣಗಳಂ ಬಿಡುವೆನೋ ಏನು ; ಆ ನಂದೀಶ್ವರನ ಪ್ರಸಾದದ ದೆಸೆಯಿಂದ ನಾನು ಕಷ್ಟಪಡುವುದಕ್ಕೆ ಕಾರಣವಾಯಿತೆಂದು ಚಿಂತಿಸಿದಳು.

ಏವಂಸಂಚಿಂತ್ಯ ಬಹುಧಾ ಮಾದಾಂಬಾ ದುಃಖಕರ್ಶಿತಾ |
ತತಶ್ಶಿವಾಲಯಂಗತ್ವಾ ಪ್ರಣಿಪತ್ಯ ಸದಾಶಿವಂ ||
ವಿಜ್ಞಾಪ್ಯಚ ಮಹಾದೇವಂ ಪುನಸ್ಸ್ವಗೃಹಮಾಯಯೌ ||

ಟೀ || ಎಲೈ ಅಗಸ್ತ್ಯನೇ ಆ ಮಾದಾಂಬೆಯು ಈ ಮೇರೆಗೆ ಅನೇಕ ಪ್ರಕಾರವಾಗಿ ಚಿಂತಿಸಿ ದುಃಖದಿಂದ ಕಂಗೆಟ್ಟಂಥಾವಳಾಗಿ ಆ ಮೇಲೆ ಶಿವಾಲಯವನ್ನೈದಿ ಸದಾ ಶಿವನನ್ನು ನಮಸ್ಕರಿಸಿ ಆ ಪರಮೇಶ್ವರನಿಗೆ ತನ್ನ ದುಃಖವನ್ನು ವಿಜ್ಞಾಪನೆಯಂ ಮಾಡಿದ ಮೇಲೆ ತನ್ನ ಮನೆಗೆ ಬಂದಳು.

ಆಗತ್ಯ ಕುತ್ರ ಚಿದ್ಗೇಹೆ ಗರ್ಭಭಾರ ಸಮಾಕುಲಾ ||
ಶ್ರಾಂತಾಸುಷ್ವಾಪ ಮಾದಾಂಬಾ ಪರ್ಯಂಕೆ ಪದ್ಮಲೋಚನಾ ||

ಟೀ || ಆ ಮಾದಾಂಬೆಯು ಗರ್ಭದ ಭಾರದಿಂದ ವ್ಯಾಕುಲಳಾಗಿ ಬಂದು ಮನೆಯಲ್ಲಿ ಬಳಲಿಕೆವುಳ್ಳವಳಾಗಿ ಮಂಚದಮೇಲೆ ಮಲಗಿದಳು.

ಸ್ವಪ್ನೆ ಸನ್ನಿಹಿತಸ್ಸಾಕ್ಷಾತ್ಕೂಡಲೀ ಸಂಗಮೇಶ್ವರಃ |
ಪ್ರಾಹಗಂಭೀರಯಾವಾಚಾ ಸಾಂಬಶ್ಚಂದ್ರಾರ್ಧಶೇಖರಃ ||

ಟೀ || ಎಲೈ ಅಗಸ್ತ್ಯನೇ ಕೇಳು, ಆ ಮಾದಾಂಬೆಯು ಸ್ವಪ್ನದಲ್ಲಿ ಕೂಡಲಸಂಗಮೇಶ್ವರನೆಂಬ ಗುರುಮೂರ್ತಿಯು ಪ್ರಸನ್ನನಾಗಿ ಪಾರ್ವತೀಸಹಿತನಾಗಿ ಅರ್ಧಚಂದ್ರನನ್ನು ಶಿರೋಭೂಷಣವಾಗಿ ಉಳ್ಳವನಾಗಿ ಬಂದು ಗಂಭೀರವಾದ ವಾಕ್ಯದಿಂದ ಆ ಮಾದಾಂಬೆಯ ಕೂಡ ಮಾತನಾಡಿದನು..

ಮಾಭೈಷೀಸ್ತ್ವಂ ಮಹಾಭಾಗೆ ವಿಸ್ತೀರ್ಣಾಯತಲೋಚನೆ |
ಭವತ್ಯಾಃ ಪ್ರಸವೇಕಾಲೊಹ್ಯದ್ಯ ಸನ್ನಿಹಿತೊಭವತ್ ||

ಟೀ || ಅನಂತರದಲ್ಲಿ ಮಹಾ ಪುಣ್ಯವತಿಯಾದ ವಿಸ್ತಾರವಾದ ಕಣ್ಣುಗಳುಳ್ಳಂಥಾ ಎಲೈ ಮಾದಾಂಬೆಯೇ ನೀನು ಭಯಪಡಬೇಡ, ಈ ವಾಗ ನಿನಗೆ ಪ್ರಸೂತಿ ಕಾಲವು ಸಮೀಪವಾಗಿರುವದು ನಿಶ್ಚಯ.

ವೃತ್ತಾಂತಂ ತವ ವಕ್ಷ್ಯಾಮಿ ಗರ್ಭಸ್ಥಸ್ಯಶಿಶೋಃಶ್ರುಣು |
ಶಿಲಾದೋನಾಮಯೋಗೀಂದ್ರ ಸ್ತಪಸ್ತೇಪೇಸುದಾರುಣಂ ||

ಟೀ || ಎಲೈ ಮೂದಾಂಬೆಯೇ ನಿನ್ನಗರ್ಭದಲ್ಲಿ ಇರುವ ಶಿಶುವಿನ ವೃತ್ತಾಂತವನ್ನು ನಿನಗೆ ಹೇಳುವೆನು ಕೇಳು, ಶಿಲಾದನೆಂಬ ಹೆಸರುಳ್ಳ ಯೋಗೀಶ್ವರನು ಒಳ್ಳೇ ಉಗ್ರತಪಸ್ಸನ್ನು ಮಾಡಿದನು.

ಶ್ರೀಶೈಲಸ್ಯನಗೇಂದ್ರಸ್ಯ ಭಾಗೇನೈಋತಿಪಾಲಿತೆ |
ಮಹಾನಂದ್ಯಭಿಧೇಕ್ಷೇತ್ರೆ ನಾನಾಮಣಿವಿಚಿತ್ರಿತೆ ||
ಸಿದ್ಧಗಂಧರ್ವಯಕ್ಷೇಶ ಕಿನ್ನರೈರುಪಸೇವಿತೆ |
ಕಲ್ಪವೃಕ್ಷತರುಛ್ಛಾಯಾ ನಿಷಣ್ಣಮುನಿಸಂಕುಲೆ ||

ಟೀ || ಪರ್ವತಶ್ರೇಷ್ಠವಾದ ಶ್ರೀಶೈಲಕ್ಕೆ ನೈರುತ್ಯಭಾಗದಲ್ಲಿ ಇರುವ ಮಹಾನಂದಿಯೆಂಬ ಹೆಸರುಳ್ಳಂಥಾ ನಾನಾಪ್ರಕಾರವಾದ ರತ್ನ ಗಳಿಂದ ವಿಚಿತ್ರವಾಗಿ ಮಾಡಲ್ಪಟ್ಟಂಥ ಸಿದ್ಧರು ಗಂಧರ್ವರು ಯಕ್ಷರು ಕಿನ್ನರರುಗಳಿಂದ ಓಲೈಸಿಕೊಳ್ಳಲ್ಪಟ್ಟಂಥ ಕಲ್ಪವೃಕ್ಷದ ನೆರಳಲ್ಲಿ ಕುಳಿತಿ ರುವ ಮುನಿಗಳ ಸಮೂಹವುಳ್ಳಂಥ ಪುಣ್ಯಕ್ಷೇತ್ರದಲ್ಲಿ ಶಿಲಾದನು ತಪಸ್ಸ ನ್ನಾಚರಿಸಿದನು.

ನೀರಾಹಾರೋಮಾಸಮೇಕಂ ಮಾಸಂತುಪವನಾಶನಃ |
ಪರ್ಣಾಶನೋಮಾಸಮೇಕ ಮಭಕ್ಷ್ಯೋಮಾಸಮೇವಚ ||

ಟೀ || ಎಲೈ ಮೂದಾಂಬೆಯೇ ಶಿಲಾದನು ಒಂದುತಿಂಗಳು ಜಲಾ ಹಾರವುಳ್ಳವನಾಗಿ, ಒಂದುತಿಂಗಳು ಗಾಳಿಯ ಆಹಾರವುಳ್ಳವನಾಗಿ, ಒಂದುಮಾಸವು ಎಲೆಗಳ ಆಹಾರವುಳ್ಳವನಾಗಿ, ಒಂದುತಿಂಗಳು ಆಹಾರ ವಿಲ್ಲದವನಾಗಿ ಇದ್ದನು.

ಗ್ರೀಷ್ಮೆಪಂಚಾಗ್ನಿಮಧ್ಯಸ್ಥೋ ವರ್ಷಾಸುಸ್ಥಂಡಿಲೆಸ್ಥಿತಃ |
ಕಂಠಲಗ್ನಜಲೆಸ್ಥಿತ್ವಾಹೇಮಂತೇತ್ಯಂತಶೀತಳೆ ||
ತಪಶ್ಚಕಾರಸತತಂ ಧ್ಯಾಯನ್ ಸಾಂಬಂಮಹೇಶ್ವರಂ ||

ಟೀ || ಆ ಶಿಲಾದಮುನಿಯು ಮತ್ತೆ ಬೇಸಿಗೆಕಾಲದಲ್ಲಿ ಪಂಚಾ ಗ್ನಿಗಳ ಮಧ್ಯದಲ್ಲಿ ಇದ್ದುಕೊಂಡು ಮಳೆಗಾಲಗಳಲ್ಲಿ ಪರಿಶುದ್ಧವಾದ ಭೂಮಿಗಳಲ್ಲಿದ್ದಂಥಾವನಾಗಿ ಅತ್ಯಂತ ಶೀತವಾದ ಹಿಮಕಾಲದಲ್ಲಿ ಕೊರ ಳುದ್ದ ನೀರಿನಲ್ಲಿ ಇದ್ದುಕೊಂಡು ಅಂಬಿಕಾಸಹಿತನಾದ ಶಿವನನ್ನು ಸ್ಮರಿಸಿ ತಪಸ್ಸು ಮಾಡಿದನು.

ತಪಸಾಜನಿತೋಧೂಮ ಸ್ಸರ್ವಲೋಕಾಂಶ್ಚ ವ್ಯಾನಶೆ |
ತಪಸ್ಸಂ ಜನಿತಾದಗ್ನೇರ್ಲೋಕಾಸ್ಸಪ್ತ ಪ್ರಜಜ್ವಲುಃ ||

ಟೀ || ಎಲೈ ಅಗಸ್ತ್ಯನೇ ಆಶಿಲಾದನ ತಪಸ್ಸಿನಿಂದ ಪುಟ್ಟಿದ ಹೊಗೆಯು ಸಪ್ತಲೋಕಂಗಳಂ ವ್ಯಾಪಿಸಿತ್ತು. ತಪಸ್ಸಿನಿಂದ ಹುಟ್ಟಿದ ಅಗ್ನಿಯಿಂದ ಏಳು ಲೋಕಗಳು ಉರಿದವು.

ತಪ್ಯತಸ್ತಸ್ಯಸಂಭೀತಾಃ ಲೋಕಪಾಲಾಸ್ಸುರೇಶ್ವರಾಃ |
ಸ್ವಾಧಿಕಾರಚ್ಯುತೇರ್ಭೀತಾ ವಿಷಣ್ಣ ಹೃದಯಾಃಪರಂ ||

ಟೀ || ಆ ಶೀಲಾದಋಷಿಯ ತಪಸ್ಸಿನಿಂದ ದೇವತಾಶ್ರೇಷ್ಠರಾದ ಲೋಕಪಾಲಕರು ಭಯಪಟ್ಟವರಾಗಿ ತಮ್ಮ ತಮ್ಮ ಅಧಿಕಾರಗಳು ನಾಶವಾಗುವವೆಂಬುವ ಶಂಕೆಯಿಂದ ಖಿನ್ನ ಮನಸ್ಸುಳ್ಳವರಾದರು.

ಆಗತ್ಯಬ್ರಹ್ಮಣೋಲೋಕಂ ಬ್ರಹ್ಮಾಣಮಿದಮಬ್ರುವನ್ |

ಟೀ || ಆ ದೇವತಾಶ್ರೇಷ್ಠರು ಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮನನ್ನು ಕುರಿತು ಇಂತೆಂದರು.

ಚತುರ್ಮುಖಮಹಾಭಾಗಲೋಕಾಸ್ಸೃಷ್ಟಾಸ್ತ್ವಯಾವಿಭೋ |
ಮೋದಮಾನಾಶ್ಚ ತಿಷ್ಠಂತಿ ಸ್ವಸ್ವಕರ್ಮಾನುಸಾರತಃ ||

ಟೀ || ನಾಲ್ಕು ಮುಖಗಳುಳ್ಳ ನಿಗ್ರಹಾನುಗ್ರಹ ಸಮರ್ಥನಾದ ಮಹೇಶ್ವರ್ಯ ಸಂಪನ್ನನಾದ ಎಲೈ ಬ್ರಹ್ಮನೇ ನಿನ್ನಿಂದ ಸೃಷ್ಟಿಸಲ್ಪಟ್ಟ ಲೋಕದ ಜನರುಗಳು ತಮ್ಮ ತಮ್ಮ ಕರ್ಮಾನುಗುಣವಾಗಿ ಸಂತೋಷವುಳ್ಳವರಾಗಿ ಯಿಧಾರೆ.

ಶ್ರೀಪರ್ವತೇಮಹಾಪುಣ್ಯೇ ಶಿಲಾದೋಮುನಿಸತ್ತಮಃ |
ತಪಸ್ತಪತಿಯೋಗೀಂದ್ರೋ ಬಹವೋವತ್ಸರಾಗತಾಃ ||

ಟೀ || ಮಹಾಪುಣ್ಯ ಸ್ವರೂಪವಾದ ಶ್ರೀಶೈಲದಲ್ಲಿ ಯೋಗಿಗಳಿಗೆ ಒಡೆಯನಾದ ಶಿಲಾದನೆಂಬ ಮುನಿಶ್ರೇಷ್ಠನು ತಪಸ್ಸನ್ನು ಮಾಡುತ್ತಾನೆ. ಅನೇಕವಾದ ವರುಷಗಳು ಕಳೆದವು.

ವಯಂತತ್ತಪಸಾಭೀತಾಸ್ತ್ವದಂತಿಕಮುಪಾಗತಾಃ |
ಭೀತ್ಯಾಸಂಪ್ರಾರ್ಥಿತೋದೇವಾನ್ ಬ್ರಹ್ಮಾತಾನ್ಪ್ರತ್ಯಭಾಷತ ||

ಟೀ || ಎಲೈ ಬ್ರಹ್ಮನೇ ನಾವು ಆ ಶಿಲಾದನ ತಪಸ್ಸಿನಿಂದ ಭಯ ಪಟ್ಟವರವಾಗಿ ನಿನ್ನ ಸಮೀಪದಲ್ಲಿ ಕುರಿತು ನಮ್ಮನ್ನು ರಕ್ಷಿಸಬೇಕೆಂಬ ದಾಗಿ ಬಂದಂಥಾವರಾದೆವು ಎಂಬದಾಗಿ ಭಯದಿಂದ ಪ್ರಾರ್ಥನೆಯನ್ನು ಮಾಡಿಸಿಕೊಳ್ಳಲ್ಪಟ್ಟ ಬ್ರಹ್ಮನು ಆ ದೇವತೆಗಳನ್ನು ಕುರಿತು ಹೇಳಿದನು.

ಭವತಾಮಾಧಿಪತ್ಯೆಸ್ಮಿನ್ನಿಸ್ಪೃಹಾ ವರ್ತತೆಮುನೇಃ |
ಶಿವಭಕ್ತಾಮಹಾತ್ಮಾನಶ್ಶಿವವ್ರತಪರಾಯಣಾಃ ||
ಬ್ರಹ್ಮವಿಷ್ಣ್ವಾದಿಲೋಕೇಷು ನಿಸ್ಪೃಹಾನಿರುಪಪ್ಲವಾಃ |
ಮಯಾಪ್ರದೀಯಮಾನೇಷು ವರೇಷ್ವಪಿಪರಾಙ್ಮುಖಾಃ ||

ಟೀ || ಎಲೈ ದೇವತೆಗಳಿರಾ ಆ ಶಿಲಾದಮುನಿಗೆ ನಿಮ್ಮ ಈ ಅಧಿಕಾರದಲ್ಲಿ ಇಚ್ಛೆಯಿಲ್ಲ. ಪರಮೇಶ್ವರನ ಭಕ್ತರಾದವರು ಮಹಾತ್ಮರೂ, ಶಿವವ್ರತದಲ್ಲಿ ಆಸಕ್ತಿಯುಳ್ಳವರೂ, ಬ್ರಹ್ಮ ವಿಷ್ಣು ಮೊದಲಾದ ದೇವತೆಗಳ ಪದವಿಗಳನ್ನು ಯಾಚಿಸದವರೂ ಒಬ್ಬರಿಂದ ಉಪದ್ರವವಿಲ್ಲದವರೂ, ನನ್ನಿಂದ ಕೊಡಲ್ಪಡುವ ವರಗಳಲ್ಲಿಯಾದರು ಅಪೇಕ್ಷೆಯಿಲ್ಲದವರೂ ಆಗಿದ್ದಾರೆ.

ಅತೋಹಿ ಮಾದೃಶಾನಾಂತುನಶಕ್ತಿಸ್ತನ್ನಿವಾರಣೆ ||
ಶಿವಸ್ಸಂವರ್ತತೆಸಾಕ್ಷಾತ್ಕೈಲಾಸೆಪರ್ವತೋತ್ತಮೆ ||

ಟೀ|| ಎಲೈ ದೇವತೆಗಳಿರಾ ಅದುಕಾರಣವಾಗಿ ನಂಮಂಥಾವರಿಗಾದರೂ ಶಿವಭಕ್ತನಾದ ಶಿಲಾದನ ತಪಸ್ಸನ್ನು ಬಿಡಿಸಬೇಕಾದ ಕಾರ್ಯದಲ್ಲಿ ಸಾಮರ್ಥ್ಯವಿಲ್ಲ ನಿಶ್ಚಯ. ಪರ್ವತಗಳಲ್ಲಿ ಶ್ರೇಷ್ಠವಾದ ಕೈಲಾಸದಲ್ಲಿ ಪ್ರತ್ಯಕ್ಷವಾಗಿ ಪರಮೇಶ್ವರನಿದ್ದಾನೆ.

ಅತಸ್ತದಂತಿಕಂಗತ್ವಾಯಾಚಯಧ್ವಂಸುರೇಶ್ವರಾಃ |
ತೇನೇದಂಕ್ರಿಯತೆಕಾರ್ಯ ಮಿತರೇಷಾಂತುದುರ್ಲಭಂ ||

ಟೀ || ಎಲೈ ದೇವತಾಶ್ರೇಷ್ಠರೇ ಅದುಕಾರಣದ ದೆಸೆಯಿಂದ ಆ ಪರಮೇಶ್ವರನ ಸಮೀಪವನ್ನೈದಿ ನಿಮ್ಮ ಕಾಂಕ್ಷೆಗಳನ್ನು ಬೇಡಿಕೊಳ್ಳಿರಿ ಆ ಪರಮೇಶ್ವರನಿಂದ ಈ ಕೆಲಸವು ಮಾಡಲ್ಪಡುವದು ಉಳಿದವರಿಗೆ ಅಸಾಧ್ಯವು.

ಇತಿಸಂಬೋಧಿತಾದೇವಾಃ ಕೈಲಾಸಗಿರಿಮಾಯಯುಃ |

ಟೀ || ಎಲೈ ಅಗಸ್ತ್ಯನೇ ದೇವತೆಗಳು ಈ ಪ್ರಕಾರವಾಗಿ ಬ್ರಹ್ಮ ನಿಂದ ಹೇಳಲ್ಪಟ್ಟವರಾಗಿ ಕೈಲಾಸಪರ್ವತವನ್ನು ಕುರಿತು ಒಂದರು.

ತತ್ರಸಾಂಬಂಮಹಾದೇವಂ ಚಂದ್ರಾರ್ಧಕೃತಶೇಖರಂ |
ಪ್ರಣಮ್ಯದಂಡವದ್ಭೂಮೌತುಷ್ಟುವುರ್ವಿವಿಧೈಸ್ತವೈಃ ||

ಟೀ || ಎಲೈ ಅಗಸ್ತ್ಯನೇಕೇಳು ಆ ಕೈಲಾಸಪರ್ವತದಲ್ಲಿ ಪಾರ್ವತಿಯೊಡನೆ ಕೂಡಿ ಅರ್ಧಚಂದ್ರನಿಂದ ಮಾಡಲ್ಪಟ್ಟ ಶಿರೋಭೂಷಣವುಳ್ಳವನಾದ ಪೂಜ್ಯಪ್ರಭುವಾದ ಪರಮೇಶ್ವರನನ್ನು ಆ ದೇವತೆಗಳು ದಂಡದ ಹಾಗೆ ಸಾಷ್ಟಾಂಗದಿಂ ನಮಸ್ಕರಿಸಿ ಅನೇಕ ಪ್ರಕಾರಂಗಳಾದ ಸ್ತೋತ್ರಂಗಳಿಂದ ಸ್ತುತಿಸಿದರು.

ಸ್ತುವತಾಂಸರ್ವದೇವಾನಾಂ ಸಾಂಬಸ್ಸತ್ಯಾದಿಲಕ್ಷಣಃ |
ವಾಮಾರ್ಧಭಾಗವಿಲಸದ್ವಿಮವತ್ಪುತ್ರಿಕಾವಿಭುಃ ||
ಆವಿರಾಸೀನ್ಮಹಾದೇವಃ ಪಿನಾಕೀವೃಷಭಧ್ವಜಃ |
ತತಃಪ್ರಾಹಸುರಾನ್ಸರ್ವಾನ್ಕುಶಲಪ್ರಶ್ನಪೂರ್ವಕಂ ||

ಟೀ || ಎಲೈ ಅಗಸ್ತ್ಯನೇಕೇಳು ಅಂಬಿಕಾಸಮೇತನಾದಂಥಾ ಸತ್ ಚಿತ್ ಆನಂದ ನಿತ್ಯಪರಿಪೂರ್ಣವೆಂಬ ಪಂಚಲಕ್ಷಣಗಳಿಂದ ಯುಕ್ತನಾದಂಥ ಎಡದ ಶರೀರದ ಅರ್ಧಭಾಗದಲ್ಲಿ ಪ್ರಕಾಶಿಸುತ್ತಿರ್ಪ ಪಾರ್ವತಿಯನುಳ್ಳಂಥಾ ವ್ಯಾಪಕನಾದಂಥ ಪೂಜ್ಯಪ್ರಭುವಾದಂಥಾ ಪಿನಾಕವೆಂಬ ಬಿಲ್ಲನುಳ್ಳಂಥ ನಂದಿಧ್ವಜವುಳ್ಳಂಥ ಪರಮೇಶ್ವರನು ತನ್ನನ್ನು ಸ್ತೋತ್ರ ಮಾಡುವ ದೇವತೆಗಳಿಗೆ ಪ್ರಸನ್ನನಾಗಿ ಆಮೇಲೆ ಆ ದೇವತೆಗಳ ಯೋಗ ಕ್ಷೇಮಗಳನ್ನು ವಿಚಾರಿಸಿ ಮಾತನಾಡಿಸಿದನು.

ಕಿಮರ್ಥಮಾಗತಾ ಯೂಯಂಸರ್ವೇಸಂಭೂಯಭೂಸುರಾಃ |
ಯುಷ್ಮಾಕಂರಾಕ್ಷಸೈ ರ್ಬಾಧಾಕಿಮದ್ಯ ಸಮುಪಾಗತಾ ||

ಟೀ || ಎಲೈ ದೇವತೆಗಳಿರಾ ನೀವೆಲ್ಲರು ಸೇರಿ ಯಾತಕ್ಕೋಸ್ಕರ ಬಂದಿರಿ ಈವಾಗ ನಿಮಗೆ ರಾಕ್ಷಸರಿಂದ ಉಪದ್ರವವುಂಟಾಗಿದೆಯೋ ಏನು ?

ಕಾಲಕೂಟಾದಿ ವಸ್ತೂನಿ ಜಾತಾನಿ ಕಿಮುಸಾಂಪ್ರತಂ |
ವಿಷ್ಣೋರ್ಬಲವತಶ್ಚಾಸ್ಯಕಿಮುಸಾಧ್ಯಮುಪಾಗತಂ ||

ಟೀ || ಎಲೈ ದೇವತೆಗಳಿರಾ ಕಾಲಕೂಟಾದಿ ಪದಾರ್ಥಗಳು ಈವಾಗ ಹುಟ್ಟಿದವೋ ಏನು ? ಬಲವಂತನಾದ ವಿಷ್ಣುವಿಗೆ ಅಸಾಧ್ಯವಾಯಿತೇ ಏನು ?

ಸರ್ವಪ್ರಪಂಚಸಂಸ್ರಷ್ಟು ರ್ವಿಧಾತುಃಕಿಮುವಸ್ಥಿತಂ |
ಯೂಯಂದೇವಾ ಯಥಾವನ್ಮೇ ಬ್ರೂತಾಗಮನಕಾರಣಂ ||

ಟೀ || ಎಲೈ ದೇವತೆಗಳಿರಾ ಸಕಲಲೋಕಗಳ ಸೃಷ್ಟಿಕರ್ತನಾದ ಬ್ರಹ್ಮನಿಗೆ ಕಷ್ಟಪ್ರಾಪ್ತವಾಯಿತೋ ಏನು ? ನೀವು ಬಂದಂಥಾ ಕಾರ್ಯದ ಹೆತುವನ್ನು ನಿಜವಾಗಿ ಹೇಳಿ ಎಂದು ಪರಮೇಶ್ವರನು ನಿರೂಪಿಸಿದನು.

ಶಿಲಾದೋ ನಾಮಯೋಗೀಂದ್ರ ಸ್ತಪಸ್ತಪತಿಭೂತಲೆ |
ತಸ್ಯೈವತಪಸಾ ಲೋಕಾಃ ಪ್ರದಗ್ಧಾಶ್ಚ ಚತುರ್ದಶ

ಟೀ || ಎಲೈಪರಮೇಶ್ವರನೇ ಶಿಲಾದನೆಂಬ ಯತಿಶ್ರೇಷ್ಠನು ಭೂಮಿಯಲ್ಲಿ ತಪಸ್ಸನ್ನು ಮಾಡುತ್ತಾನೆ ಆತನ ತಪಸ್ಸಿನಿಂದಲೇ ಹದಿನಾಲ್ಕು ಲೋಕಂಗಳು ಸುಟ್ಟುಹೋದವು.

ತೇನಭೀತಾವಯಂಸರ್ವೆ ತ್ವದಂತಿಕಮುಪಾಗತಾಃ |
ತಸ್ಮಾಭೀಃಕಾರಣಂ ಕಿಂವಾ ನಜ್ಞಾತಂತತ್ರ ಶಂಕರ ||

ಟೀ || ಎಲೈ ಪರಮೇಶ್ವರನೇ ನಾವೆಲ್ಲರೂ ಆ ಶಿಲಾದನಿಂದ ಭಯಪಟ್ಟವರಾಗಿ ನಿನ್ನ ಸಮೀಪಕ್ಕೆ ಬಂದೆವು ಆ ವಿಚಾರದಲ್ಲಿ ಯಾವ ಕಾರಣವೋ ನಮ್ಮಿಂದೆ ತಿಳಿಯಲ್ಪಡಲಿಲ್ಲವು.

ತ್ರಾಹಿನಃ ಪಾರ್ವತೀನಾಥ ಕೃಪಯಾ ಪರಮೇಶ್ವರ |
ಇತಿಸಂಪ್ರಾರ್ಥಿತಶ್ಶಂಭುರ್ದೇವದೇವಸ್ತ್ರಿಲೋಚನಃ ||

ಟೀ || ಪಾರ್ವತೀಪತಿಯಾದ ಎಲೈ ಪರಮೇಶ್ವರನೇ ದಯದಿಂಡ ನಮ್ಮನ್ನು ರಕ್ಷಿಸೆಂದು ದೇವತೆಗಳು ದೇವರಿಗೆ ದೇವನಾದ ಮೂರು ನಯನಂಗಳುಳ್ಳ ಪರಮೇಶ್ವರನನ್ನು ಬೇಡಿಕೊಂಡರು.

ಆರುಹ್ಯ ವೃಷಭಂದಿವ್ಯಂ ಪಾರ್ವತ್ಯಾ ಸಹಶಂಕರಃ |
ಬ್ರಹ್ಮಣಾವಿಷ್ಣುನಾಚೈವ ಸುರೈಸ್ಸರ್ವೈಸ್ಸಮನ್ವಿತಃ ||

ಟೀ || ಎಲೈ ಅಗಸ್ತ್ಯನೇ ಪರಮೇಶ್ವರನು ಪಾರ್ವತಿಯಿಂದಕೂಡಿ ದಿವ್ಯಸ್ವರೂಪನಾದ ವೃಷಭೇಶ್ವರನನ್ನು ಹತ್ತಿಕೊಂಡು ಬ್ರಹ್ಮನಿಂದಲೂ ವಿಷ್ಣುವಿನಿಂದಲೂ ಸಕಲದೇವತೆಗಳಿಂದಲೂ ಸಹಿತನಾಗಿ ಹೊರಟನು.

ಆಜಗಾಮ ತಪೊದೇಶಂ ಯತ್ರಾಸ್ತೆ ಮುನಿಪುಂಗವಃ |
ಯೋಗಂ ವಿಹಾಯ ಮುನಿರಾಟ್ತ್ವಮಪಶ್ಯತ್ರಿಲೋಚನಂ ||

ಟೀ || ಎಲೈ ಅಗಸ್ತ್ಯನೇ ಆ ಸಾಂಬಸದಾಶಿವನು ಮುನಿಶ್ರೇಷ್ಠನಾದ ಶಿಲಾದನು ಇರುವ ತಪೋದ್ದೇಶವನ್ನು ಕುರಿತು ಬಂದು ಪ್ರಸನ್ನನಾದನು. ಆ ಶಿಲಾದನು ಮೂರು ಕಣ್ಣುಗಳುಳ್ಳ ಪರಮೇಶ್ವರನನ್ನು ತಾನುಮಾಡುವ ತಪಸ್ಸಂ ಬಿಟ್ಟು ಕಣ್ದೆರೆದು ನೋಡಿದನು,

ಪ್ರಣಮ್ಯ ಪಾರ್ವತೀನಾಥಂ ದಂಡವದ್ಧರಣೀತಲೆ |
ತುಷ್ಟಾವವಿವಿಧೈಸ್ತೋತ್ರೈ ಋಗ್ಯಜುಸ್ಸಾಮಸಂಭವೈಃ ||

ಟೀ || ಆ ಶಿಲಾದಮುನಿಯು ಎದ್ದು ಪಾರ್ವತೀಪತಿಯಾದ ಪರಮೇಶ್ವರನನ್ನು ಭೂಮಿಯಲ್ಲಿ ದಂಡದಂತೆ ಸಾಷ್ಟಾಂಗವಾಗಿ ನಮಸ್ಕರಿಸಿದನು. ಋಗ್ವೇದ ಯಜುರ್ವೇದ ಸಾಮವೇದಗಳಿಂದ ಹುಟ್ಟಿದಂಥ ಅನೇಕ ಪ್ರಕಾರಗಳಾದ ಸ್ತೋತ್ರಗಳಿಂದ ಸ್ತುತಿಸಿದನು.

ಸರ್ವೇಷಾಂಕಾರಣಾನಾಂಚ ಕಾರಣಾಯ ನಮೋನಮಃ |
ಯಜ್ವನಾಂಫಲದಾತ್ರೇಚ ಯಜ್ಞರೂಪಾಯತೆನಮಃ ||
ಅಶೇಷಯೋಗಗಮ್ಯಾಯ ಯೋಗರೂಪಾಯತೇನಮಃ |
ಭಕ್ತಸ್ಥಲಸ್ವರೂಪಾಯ ಭಕ್ತಿಗಮ್ಯಾಯತೇನಮಃ ||
ಮಾಹೇಶ್ವರಸ್ಥಲಜ್ಞಾಯ ಮಹೇಶಸ್ಥಲರೂಪಿಣೆ |
ಪ್ರಸಾದಿಸ್ಥಲರೂಪಾಯ ಪ್ರಸಾದಿಸ್ಥಲವೇದಿನೆ ||
ಪ್ರಾಣಲಿಂಗಿಸ್ಥಲಜ್ಞಾಯ ಪ್ರಾಣಲಿಂಗಿಸ್ಥಲಾತ್ಮನೆ |
ನಮಸ್ಕರಣರೂಪಾಯ ನಮಸ್ಕರಣ ವೇದಿನೆ ||
ಐಕ್ಯಸ್ಥಲಸ್ವರೂಪಾಯ ಸ್ವರೂಪೈಕ್ಯಸ್ಥಲಾತ್ಮನೆ |
ಭಾವಲಿಂಗಸ್ವರೂಪಾಯ ಪ್ರಾಣಲಿಂಗ ಸ್ವರೂಪಿಣೆ ||
ಇಷ್ಟಲಿಂಗಾತ್ಮನೆ ತುಭ್ಯಂ ಗುರುರೂಪಾಯತೇ ನಮಃ |
ಏವಂಸ್ತುತೋಮಹಾದೇವಃ ಪಾರ್ವತೀಪ್ರಾಣವಲ್ಲಭಃ ||

ಟೀ || ದೇವರಿಗೆ ದೇವನಾದಂಥಾ, ಸೃಷ್ಟಿಸ್ಥಿತಿಲಯಾಧಿ ಕಾರಿಗಳಾದಂಥಾ ಬ್ರಹ್ಮ, ವಿಷ್ಣು, ರುದ್ರ, ಇಂದ್ರಾದಿಗಳು, ಸಮಸ್ತಭೂತಂಗಳು' ಇಂದ್ರಿಯಂಗಳು ಮೊದಲಾದ ಸಕಲ ಕಾರಣಂಗಳಿಗೆ ಕಾರಣನಾದಂಥ ಯಾಗಕರ್ತೃಗಳಿಗೆ ಫಲಪ್ರದನಾದಂಥ ಯಜ್ಞಸ್ವರೂಪನಾದಂಥ, ಅನೇಕವಾದ ಅಷ್ಟಾಂಗ ಯೋಗಂಗಳಿಂದ ಹೊಂದಲು ಯೋಗ್ಯನಾದಂಥ ಭಕ್ತಸ್ಥಲಸ್ವರೂಪನಾದಂಥ ಭಕ್ತಿಯಿಂದ ಗಮ್ಯನಾದಂಥ ಮಾಹೇಶ್ವರಸ್ಥಲವನ್ನು ಬಲ್ಲಂಥ ಮಹೇಶ್ವಸ್ಥಲಸ್ವರೂಪನಾದಂಥ ಪ್ರಸಾದಿಸ್ಥಲವನ್ನು ಬಲ್ಲಂಥ ಪ್ರಸಾದಿಸ್ಥಲ ಸ್ವರೂಪಿಯಾದಂಥ ಪ್ರಾಣಲಿಂಗಿಸ್ಥಲವ ಬಲ್ಲಂಥ ಪ್ರಾಣಲಿಂಗಿಸ್ಥಲಸ್ವರೂಪನಾದಂಥ, ಶರಣಸ್ಥಲವ ಬಲ್ಲಂಥ ಶರಣಸ್ಥಲ ಸ್ವರೂಪನಾದಂಥ, ಐಕ್ಯಸ್ಥಲವ ಬಲ್ಲಂಥ ಐಕ್ಯಸ್ಥಲಸ್ವರೂಪನಾದಂಥ ಭಾವಲಿಂಗಸ್ವರೂಪಿಯಾದಂಥ ಪ್ರಾಣಲಿಂಗ ಸ್ವರೂಪಿಯಾದಂಥ ಇಷ್ಟಲಿಂಗ ಸ್ವರೂಪಿಯಾದಂಥ ಗುರುಸ್ವರೂಪನಾದಂಥ ನಿನಗೋಸ್ಕರ ನಮಸ್ಕಾರವು, ಈ ಪ್ರಕಾರವಾಗಿ ಶಿಲಾದಮುನಿಯಿಂದ ಪಾರ್ವತೀ ಪ್ರಾಣಕಾಂತನಾದ ಮಹಾದೇವನು ಸ್ತೋತ್ರಮಾಡಿಸಿಕೊಳ್ಳಲ್ಪಟ್ಟಂಥಾವನಾಗಿ ಕೃಪಾಪರಿಪೂರ್ಣನಾಗಿ ಶಿಲಾದನನ್ನು ಕುರಿತು ಈ ಮಾತನ್ನು ಹೇಳಿದನು.

ಭೋಭೋಶಿಲಾದವು ದ್ಭಕ್ತ ತುಷ್ಟೋಽಹಂ ತಾಪಸೋತ್ತಮ ||
ಕಿಮಾಪ್ಸಿತಂತವಾಸ್ತ್ಯದ್ಯತತ್ತೆ ದಾಸ್ಯಾಮಿ ಸಾಂಪ್ರತಂ ||

ಟೀ || ನನ್ನ ಭಕ್ತನಾದ ಯತಿಶ್ರೇಷ್ಠನಾದ ಎಲೈ ಶಿಲಾದನೇ ನಿನ್ನ ಭಕ್ತಿ ಸ್ತೋತ್ರಗಳಿಂದ ಸಂತೋಷಪಟ್ಟೆನು. ನಿನ್ನ ಇಷ್ಟಾರ್ಥವನ್ನು ಈಗ ನಾನು ಕೊಡುತ್ತೇನೆ.

ತಪಸಾ ತವತುಷ್ಟೋಽಹಂ ತ್ವದ್ಭಕ್ತ್ಯಾತು ವಶಂಗತಃ |

ಟೀ || ಎಲೈ ಶಿಲಾದಮುನಿಯೇ ನಿನ್ನ ತಪಸ್ಸಿನಿಂದ ಸಂತೋಷಿಸಲ್ಪಟ್ಟೆನು. ನಾನು ನಿನ್ನ ಭಕ್ತಿಗೆ ಸ್ವಾಧೀನನಾದೆನು.

ದೇವದೇವ ಮಹಾಭಾಗ ಯದಿತೇಸ್ತಿಕೃಪಾಮಯಿ |
ಛಾಯಾಸುಕಲ್ಪ ವೃಕ್ಷಾಣಾಂ ಸಂಸ್ಥಿತಾನಾಮಿವಪ್ರಭೊ ||
ಗೃಹಾಂಗಣೇತುಸಂಬದ್ಧ ಕಾಮಧೇನುವತಾಮಿವ |
ಅನ್ಯಕಾಮಃ ಕಿಮಸ್ತ್ಯದ್ಯ ತ್ವತ್ಪ್ರಸಾದಂವಿನಾ ಪ್ರಭೋ ||

ಟೀ || ದೇವರಿಗೆ ದೇವನಾದ ಮಹೈಶ್ವರ್ಯ ಸಂಪನ್ನನಾದ ಎಲೈ ಪರಮೇಶ್ವರನೇ ನನ್ನಲ್ಲಿ ನಿನಗೆ ಕೃಪೆ ಇದ್ದದ್ದೇ ಆದರೆ ಕಲ್ಪವೃಕ್ಷಗಳ ನೆರಳಲ್ಲಿ ಇರುವಂಥಾವರಿಗೂ ತಮ್ಮ ಮನೆಯ ಅಂಗಳದಲ್ಲಿ ಕಾಮಧೇನು ಉಳ್ಳಂಥಾವರಿಗೂ ಮತ್ತೊಂದರ ಅಪೇಕ್ಷೆಯಿಲ್ಲದಂತೆ ನನಿಗೂ ನಿಮ್ಮ ಅನುಗ್ರಹವನ್ನು ಹೊರ್ತು ಮತ್ತೊಂದು ಕೋರಿಕೆ ಏನು ಇದೆ;

ಅತಸ್ತ್ವತ್ಪಾದಕಮಲಧ್ಯಾಯಿನೊಮಮಶಂಕರ |
ಭಕ್ತಿಮೆವಪರಾಂದೆಹಿ ತ್ವತ್ಪದದ್ವಯ ನಿಶ್ಚಲಾಂ ||

ಟೀ || ಎಲೈ ಪರಮೇಶ್ವರನೇ ಅದುಕಾರಣ ವಾಗಿ ನಿನ್ನ ಪಾದಕಮಲಗಳಂ ಧ್ಯಾನಿಸುತ್ತಿರ್ದ ನನಿಗೆ ನಿನ್ನ ಪಾದಯುಗ್ಮದಲ್ಲಿ ನಿಶ್ಚಲವಾದ ಉತ್ಕೃಷ್ಟ ಭಕ್ತಿಯನ್ನೇಕೊಡು,

ಇತಸ್ಸಂಪ್ರಾರ್ಥನೀಯಂಮೆ ನಾನ್ಯದಸ್ತಿಮಹೇಶ್ವರ |
ತಥಾಪಿಕಾಮಯೆಃಕಿಂಚಿದ್ವರಂಮಧೃದಯಸ್ಥಿತಂ ||

ಟೀ || ಎಲೈ ಪರಮೇಶ್ವರನೇ ಇದಕ್ಕಿಂತಲೂ ನನ್ನಿಂದ ಬೇಡಿಕೊಳ್ಳತಕ್ಕದ್ದು ಮತ್ತೇನೂ ಇಲ್ಲಾ ಹಾಗಾದಾಗ್ಯೂ ನನ್ನ ಮನಸ್ಸಿನಲ್ಲಿ ಇರುವ ಒಂದು ವರವನ್ನು ಮಾತ್ರ ಇಚ್ಛೈಸುತ್ತಲಿಧೇನೆ.

ತ್ವತ್ಪಾದಪದ್ಮಯುಗಳಭ್ರಮರಾಯಿತ ಚೇತಸಂ |
ಶಿವಭಕ್ತಂಮಹಾತ್ಮಾನಂ ಶಿವವ್ರತಪರಾಯಣಂ ||
ಪುತ್ರಂದೇಹಿಮಹಾಭಾಗ ಕೃಪಾಸ್ತಿತವಚೇನ್ಮಯಿ |
ಇತಿಸಂಪ್ರಾರ್ಥಿತಶ್ಯಂಭುರ್ದೇವ ದೇವಸ್ತ್ರೀಲೋಚನಃ |
ತಥಾಸ್ತ್ವಿತಿ ಪತ್ರಿಜ್ಞಾಯ ಸಹದೇವ್ಯೆಸ್ತಿರೊದಧೆ ||

ಟೀ || ಮಹೈಶ್ವರ್ಯಸಂಪಂನನಾದ ಎಲೈ ಪರಮೇಶ್ವರನೇ ನಿನಗೆ ನನ್ನ ವಿಷಯದಲ್ಲಿ ದಯೆಯಿದ್ದರೆ ನಿಂನಚರಣಾಂಬುಜಗಳೆಡರಲ್ಲಿ ಭ್ರಮರದ ಹಾಗೆ ಇರುವ ಮನಸ್ಸುಳಂಥ ಶಿವಭಕ್ತನಾದ ಮಹಾಪುರುಷನಾದ ಶಿವ ವ್ರತಗಳಲ್ಲಿ ಆಸಕ್ತಿಯನುಳ್ಳ ಒಬ್ಬ ಪುತ್ರನನ್ನು ಕೊಡು ಎಂಬದಾಗಿ ಶಿಲಾದನಿಂದ ಪ್ರಾರ್ಥಿಸಲ್ಪಟ್ಟ ಮೂರುಕಣ್ಣುಳ್ಳ ಸುಖಾಶ್ರಯನಾದ ದೇವರಿಗೆ ದೇವನಾದ ಪರಮೇಶ್ವರನು ನೀನು ಬೇಡಿದಂಥಾ ಕುಮಾರ

ನನ್ನು ಕೊಡುವೆನು ಹಾಗೇ ಆಗಲಿಯೆಂದು ಪ್ರತಿಜ್ಞೆಯಂಮಾಡಿ ಸಕಲದೇವತೆಗಳೊಡಗೂಡಿ ಅಂತರ್ಧಾನನಾದನು.

ತತಃಪುತ್ರೋಮುನೇರ್ಜಾತೊ ನಂದೀಶಶ್ಯಂಸಿತವ್ರತಃ ।
ಸೊಪ್ಯಷ್ಟವರ್ಷಕೊಬಾಲ ಸ್ತಪಸಾಪರಮೇಶ್ವರಂ ॥
ತೊಷಯಿತ್ವಾಜಗದ್ಯೋನಿಂ ಶಂಕರಂ ಲೋಕಶಂಕರಂ ।
ವಾಹನತ್ವ ಮನುಪ್ರಾಪ್ತೊ ಗಣಾಧೀಶತ್ವಮನ್ವಗಾತ್ ॥

ಟೀ ॥ ಎಲೈ ಮಾದಾಂಬೆಯೇ ಪರಮೇಶ್ವರನು ಶಿಲಾದಮುನಿಗೆ ವರವಂಕೊಟ್ಟು ಕೈಲಾಸಕ್ಕೆ ಹೋದಮೇಲೆ ಶ್ಲಾಘಿಸಲ್ಪಟ್ಟ ವ್ರತವನ್ನುಳ್ಳ ನಂದೀಶ್ವರನೆಂಬ ಹೆಸರನ್ನುಳ್ಳ ಅನಾದಿ ವೃಷಭೇಶ್ವರನೇ ಶಿವಾಜ್ಞೆಯಿಂದಾ ಆ ಶಿಲಾದನಿಗೆ ಕುಮಾರನಾದನು ಆ ನಂದೀಶ್ವರ ಎಂಟು ವರ್ಷದ ಬಾಲಕನಾಗಿ ತಪಸ್ಸಿನಿಂದ ಜಗತ್ಕಾರಣನಾದಂಥ ಸುಖಪ್ರದನಾದಂಥ ಶಿವನನ್ನು ಸಂತೋಷಪಡಿಸಿ ಆತನಿಗೆವಾಹನವಾಗಿರೋಣವನ್ನೂ ಪ್ರಮಥಗಣಾಧ್ಯಕ್ಷತೆಯನ್ನೂ ಪಡೆದನು.

ಕೆನಚಿತ್ಕಾರಣೆನಾದ್ಯ ತ್ವದ್ಗರ್ಭಂಸಮುಪಸ್ಥಿತಃ ।
ಗರ್ಭಸ್ಥಿತೊಪಿಬಾಲೋಯಂ ಯೋಗೀ ಯೋಗೈಕತತ್ಪರಃ

ಟೀ ॥ ಎಲೈ ಮಾದಾಂಬೆಯೇ ಈವಾಗ ಒಂದಾನೊಂದು ಕಾರಣದಿಂದ ನಿನ್ನ ವ್ರತಪರಿಪಾಲನಾರ್ಥವಾಗಿ ನಿನ್ನ ಗರ್ಭಸ್ಥಲವಂ ಹೊಂದಿದವನಾದನು. ಅಷ್ಟಾಂಗಯೋಗವುಳ್ಳವನಾದ ಈ ಬಾಲಕನು ಗರ್ಭದಲ್ಲಿರುವಂಥಾವನಾದಾಗ್ಯೂ ಶಿವಯೋಗದಲ್ಲಿ ಮುಖ್ಯ ತಾತ್ಪರ್ಯವುಳ್ಳವನು.

ಶಾರ್ದೂಲವಿಕ್ರೀಡಿತವೃತ್ತಂ.

ಕಾಂತೆಶಾವಕ ಗರ್ಭನಾಮನಿ ಗುಹಾಮಧ್ಯೆತುನಂದೀಶ್ವರಃ ।
ಪ್ರಾಣಾಪಾನಯುಗಂನಿರುಧ್ಯ ನಿವಸತ ದ್ಯೈಶ್ವರಂತೆಜಸಂ ॥
ಆಧಾರಾದಿಸಮಸ್ತ ಚಕ್ರನಿಚಯಂ ನೀತ್ವೊರ್ಧ್ವ ಮತ್ಯುಜ್ವಲಂ ।
ಯಚ್ಚಕ್ರೆ ಮತಿಮಾತ್ಮನಶ್ಚ ಸತತಂ ಧ್ಯಾಯನ್ಬಹಿರ್ನಿರ್ಗಮೆ ॥

ಟೀ ॥ ಎಲೇ ಮಾದಾಂಬೆಯೇ ಕೇಳು ನಿನ್ನ ಸಂಬಂಧಿಯಾದ ಗರ್ಭವೆಂಬ ಹೆಸರನ್ನುಳ್ಳ ಗವಿಯನಡುವೆ ವಾಸಿಸುತ್ತಿರುವ ಈ ನಂದೀಶ್ವರನಾದೊಡೆ ಪ್ರಾಣವಾಯುವನ್ನೂ ಅಪಾನವಾಯುವನ್ನೂ ನಿಲ್ಲಿಸುವಂ

ಥಾವನಾಗಿ ಆಧಾರಸ್ವಾಧಿಷ್ಠಾನ ಮೊದಲಾದ ಸಮಸ್ತ ಚಕ್ರಂಗಳನ್ನೂ ದಾಂಟಿ, ಮೇಲೆ ಅತ್ಯಂತವಾಗಿ ಬೆಳಗುತ್ತಿದ್ದಂಥಾ ಶಿವ ಸಂಬಂಧಿಯಾದ ದಿವ್ಯಕಳೆಯನ್ನು ನಿರಂತರವೂ ಧ್ಯಾನಿಸುವವನಾಗಿ ತನ್ನ ಬುದ್ಧಿಯನ್ನು ಹೊರಕ್ಕೆ ಹೊರಡಬೇಕೆಂಬುವದರಲ್ಲಿ ಇಟ್ಟನು ಎಂಬದಾಗಿ ಪರಮೇಶ್ವರನು, ಮಾದಾಂಬೆಗೆ ನಿರೂಪಿಸಿದವಿಸ್ತಾರವನ್ನು ಅಗಸ್ತ್ಯನಿಗೆ ಕುಮಾರಸ್ವಾಮಿಯು ಬೋಧಿಸಿದನು.

ಓಂ ಇತಿಶ್ರೀಬಸವಪುರಾಣೆ ಸ್ವರೂಪಗ್ರಂಥೆ ನಂದಿವ್ರತಯು |
ಕ್ತ ಮಾದಾಂಬಾ ಗರ್ಭಮಹಿಮಾ ಭಿವರ್ಣನಂ ನಾಮ ||
ತೃತೀಯೋಧ್ಯಾಯಃ

---

ಅಥ ಬಸವೇಶ್ವರಾವತರಣ ಪ್ರತಿಪಾದಕಃ ಚತುರ್ಥಾದ್ಯಾಯಃ ಪ್ರಾರಭ್ಯತೆ.

ಮಾದಾಂಬಾ ಸಂಗವೆಶಾನಂ ಸ್ವಪುರೋಭಾಗಸಂಸ್ಥಿತಂ |
ಹರ್ಷಸಂಫುಲ್ಲ ಹೃದಯಾಸ್ವಪ್ನೆ ತಂಪ್ರತ್ಯಭಾಷತ ||

ಟೀ || ಎಲೈ ಅಗಸ್ತ್ಯನೇ ಸ್ವಪ್ನದಲ್ಲಿ ತನ್ನ ಮುಂಭಾಗದಲ್ಲಿ ನಿಂತಿರುವಂಥ ಆ ಸಂಗವೇಶ್ವರನನ್ನು ಕುರಿತು ಸಂತೋಷದಿಂದ ವಿಕಸಿತವಾದ ಮನಸ್ಸುಳ್ಳ ಆ ಮಾದಾಂಬೆಯು ಹೀಗೆಂದು ಮಾತನಾಡಿದಳು.

ಕಸ್ತ್ವಂದೆವ ಮಹಾಭಾಗ ಯೆನೆತ್ಥಂಪರಿಭಾಷಿತಂ |
ಇದಾನೀಂಶೊತ್ರು ಮಿಚ್ಛಾಮಿ ಯೊಗಮಾಹಾತ್ಮ್ಯಮುತ್ತಮಂ ||

ಟೀ || ಮಹೈಶ್ವರ್ಯಸಂಪನ್ನನಾದ ಎಲೈ ದೇವನೆ ನೀನು ಯಾವಾತನು, ಈ ಪ್ರಕಾರವಾಗಿ ನಿನ್ನಿಂದ ಹೇಳಲ್ಪಟ್ಟಂಥ ಶ್ರೇಷ್ಠವಾದ ಶಿವಯೋಗದ ಮಹಿಮೆಯನ್ನು ಕೇಳಬೇಕೆಂಬದಾಗಿ ಈಗ ಇಚ್ಛೈಸುತ್ತಿದ್ದೇನೆ.

ಕೃಪಯಾ ವದಸರ್ವೆಷಾಂರಹಸ್ಯಂ ಸವಿಶೆಷಕಂ ||

ಟೀ || ಎಲೈ ದೇವನೆ ಸಕಲಗಳಲ್ಲಿಯೂ ಗೋಪ್ಯವಾದ ಯೋಗಮಹಿಮೆಯನ್ನು ವಿಶೇಷದೊಡನೆ ಕೂಡಿರುವಹಾಗೆ ಹೇಳು ಎಂಬದಾಗಿ ಮಾದಾಂಬೆ ಬೆಸಗೊಂಡಳು.

ಸಂಗಮೇಶೋಹಮಧುನಾ ತವಸನ್ನಿಹಿತೋಭವಂ ।
ವಕ್ಷ್ಯಾಮಿ ಯೋಗ ಮಾಹಾತ್ಮ್ಯಂಶ್ರುಣುತ್ವಂವರವರ್ಣಿನಿ ॥

ಟೀ || ಎಲೇ ಮಾದಾಂಬೆಯೇ ನಾನು ಸಂಗಮೇಶ್ವರನೆಂಬ ಗುರುಮೂರ್ತಿಯು. ಈಗ ನಿನ್ನ ಬೋಧಿಸಬೇಕೆಂದು ಸಮೀಪಕ್ಕೆ ಬಂದವನಾದೆನು, ಈ ನಂದೀಶ್ವರನ ಶಿವಯೋಗದ ಮಹಿಮೆಯನ್ನು ಹೇಳುವೆನು, ನೀನು ಕೇಳು.

ಮೂಲಾಧಾರಾ ಭಿಧಂಚಕ್ರಂ ಚತುರ್ದಳ ಮುದೀರಿತಂ ।
ಸ್ವಾಧಿಷ್ಠಾನಾಭಿಧಂಚಕ್ರಂ ಲಿಂಗಸ್ಥಂಷಡ್ದಳಾನ್ವಿತಂ ॥
ಚಕ್ರಂತುಮಣಿ ಪೂರಾಖ್ಯಂ ನಾಭಿಸ್ಥಂದಶಪತ್ರಕಂ ।
ಅನಾಹತಾಭಿಧಂಚಕ್ರಂದ್ವಾದಶಾರಂ ಹೃದಿಸ್ಥಿತಂ ॥
ಆಜ್ಞಾ ಚಕ್ರಂಭ್ರುವೋರ್ಮಧ್ಯೆ ದ್ವಿದಳಂಪರಿಕೀರ್ತಿತಂ ।
ತಸ್ಯೋರ್ಧ್ವಂಶಿರಸಿಸ್ಥಾನೆ ಸಹಸ್ರಾರಂತುತಿಷ್ಠತಿ ॥
ಸಹಸ್ರಾರೆಸ್ಥಿತಂಚಂದ್ರ ಮಂಡಲೆ ಪರಿಶೋಭಿತಂ ।
ನಕಾರೋಸ್ತಿಮಹಾಭಾಗೆ ಮೂಲಾಧಾರೆ ಚತುರ್ದಳೆ ॥
ಆಚಾರಲಿಂಗನಾಮಾಸೌಪೃಥ್ವೀತತ್ವಸ್ವರೂಪಭೃತ್ ।
ಸ್ವಾಧಿಷ್ಠಾನೆ ಮಕಾರೋಸ್ತಿ ಗುರುಲಿಂಗಸ್ಯವಾಚಕಃ ॥
ಜಲತತ್ವಸ್ವರೂಪಶ್ಚ ವೇದಿತವ್ಯೋವರಾನನೆ ।
ಶಿಕಾರೋಮಣಿಪೂರಸ್ತಿ ಶಿವಲಿಂಗಸ್ಯವಾಚಕಃ ॥
ತೇಜಸ್ತತ್ವಾತ್ಮಕಸ್ಸಾಧ್ವಿನಾತ್ರಕಾರ್ಯಾವಿಚಾರಣಾ ।
ಅನಾಹತೇತುವಾಕಾರಶ್ಚರಲಿಂಗಸ್ಯವಾಚಕಃ ॥
ವಾಯುತತ್ವಮಯಸ್ಸಾಧ್ವಿವಿದ್ವದ್ಭಿಃ ಪರಿಕೀರ್ತಿತಃ ।
ವಿಶುದ್ಧೆತುಯಕಾರೋಸ್ತಿ ಪ್ರಸಾದಸ್ಯಚವಾಚಕಃ ॥
ಆಕಾಶತತ್ವಮಿತ್ಯೇವ ಮಾಗಮೈಃ ಪರಿಕೀರ್ತಿತಃ ।
ಆಜ್ಞಾ ಚಕ್ರೆತ್ರಯೀರೂಪಃ ಪ್ರಣವೋಸ್ತಿತ್ರಿಮಾತ್ರಕಃ ॥
ವಾಚಕಶ್ಚ ಮಹಾನಾಮ್ನೋ ಮನಸ್ತತ್ವಸ್ವರೂಪಭೃತ್ ।

ಟೀ || ಎಲೇ ಮಾದಾಂಬೆಯೇ ಮೂಲಾಧಾರವೆಂಬ ಅಭಿಧಾನವುಳ್ಳ ಚಕ್ರವು ನಾಲ್ಕು ದಳವುಳ್ಳದ್ದೆಂದು ನಿರೂಪಿಸಲ್ಪಟ್ಟಿತು, ಸ್ವಾಧಿಷ್ಠಾನವೆಂಬ ಚಕ್ರವು ಲಿಂಗಸ್ಥಾನದಲ್ಲಿರುವಂಥಾದ್ದಾಗಿ ಆರು ದಳಗಳನ್ನು

ಳ್ಳದ್ದು, ಮಣಿಪೂರವೆಂಬ ಹೆಸರುಳ್ಳ ಚಕ್ರವು ನಾಭಿಸ್ಥಾನದಲ್ಲಿರುವದಾಗಿ ಹತ್ತು ದಳವನ್ನುಳ್ಳದ್ದು. ಅನಾಹತವೆಂಬ ಹೆಸರುಳ್ಳ ಚಕ್ರವು ಹೃದಯಸ್ಥಾನದಲ್ಲಿರುವದಾಗಿ ಹನ್ನೆರೆಡು ದಳಗಳನ್ನುಳ್ಳದ್ದು ಹದಿನಾರು ದಳಗಳುಳ್ಳ ವಿಶುದ್ಧಿಯೆಂಬ ಚಕ್ರವು ಕಂಠದೇಶದಲ್ಲಿರುವದೆಂದು ನಿರೂಪಿಸಲ್ಪಟ್ಟಿತು. ಆಜ್ಞಾಚಕ್ರವಾದರೆ ಭ್ರೂಮಧ್ಯದಲ್ಲಿ ಎರಡು ದಳವುಳ್ಳದೆಂದು ನುತಿಸಲ್ಪಟ್ಟಿತು. ಆಜ್ಞಾಚಕ್ರದ ಮೇಲೆ ಮಸ್ತಕದಲ್ಲಿ ಸಾವಿರ ಯಸಳುಳ್ಳ ತಾವರೆ ಇರುವದು, ಸಹಸ್ರದಳಕಮಲದೊಳಗೆ ತೋರುವ ಚಂದ್ರಮಂಡಲ ಮಧ್ಯದಲ್ಲಿ ಶೋಭಿಸುವಂಥಾ ಚಿತ್ರಭೆಯು ತೋರುತ್ತಿರುವದು. ಮಹಾಜ್ಞಾನಿಯಾದ ಎಲೇ ಮಾದಾಂಬೆಯೇ ನಾಲ್ಕು ದಳವನ್ನುಳ್ಳ ಮೂಲಾಧಾರವೆಂಬ ಚಕ್ರದಲ್ಲಿ ನಕಾರಾಕ್ಷರವು ಇರುತ್ತಿಧೆ. ಈ ನಕಾರವು ಆಚಾರಲಿಂಗವೆಂಬ ಹೆಸರಿಂದ ಭೂತಸ್ವರೂಪವಧರಿಸಿಕೊಂಡು ಇದೆ. ಸ್ವಾದಿಷ್ಠಾನ ಚಕ್ರದಲ್ಲಿ ಗುರುಲಿಂಗದ ವಾಚ್ಯರೂಪವಾದ ಮಕಾರವು ಜಲತತ್ವಸ್ವರೂಪವೆಂದು ತಿಳಿಯತಕ್ಕದ್ದು, ಮಣಿಪೂರಚಕ್ರದಲ್ಲಿ ಶಿವಲಿಂಗವಾಚ್ಯರೂಪವಾದ ಶಿಕಾರವು ಅಗ್ನಿರೂಪವಾಗಿ ಇದೆ. ಈ ಅರ್ಥದಲ್ಲಿ ಸಂದೇಹವಿಲ್ಲ. ಅನಾಹತಚಕ್ರದಲ್ಲಿ ಜಂಗಮಲಿಂಗವಾಚಕವಾದ ವಾಕಾರವು ವಾಯುತತ್ವಸ್ವರೂಪವೆಂದು ವಿದ್ವಾಂಸರಿಂದ ಪ್ರತ್ಯಕ್ಷವಾಗಿ ನಿರೂಪಿಸಲ್ಪಟ್ಟಿದೆ. ವಿಶುದ್ಧಿಯೆಂಬ ಚಕ್ರದಲ್ಲಿ ಪ್ರಸಾದಲಿಂಗವಾಚಕವಾದ ಯಕಾರಪ್ರಣವವು ಆಕಾಶತತ್ವವೆಂದು ಆಗಮಂಗಳಿಂದ ಸ್ತೋತ್ರಮಾಡಲ್ಪಟ್ಟಿತು. ಆಜ್ಞಾಚಕ್ರದಲ್ಲಿ ಮಹಾಲಿಂಗವಾಚಕವಾಗಿ ವೇದಸ್ವರೂಪವಾದ ಅಕಾರೋಕಾರಮಕಾರಸ್ವರೂಪವಾದ ಪ್ರಣವವು ಮನಸ್ತತ್ವಸ್ವರೂಪವಂಧರಿಸಿಕ್ಕೊಂಡು ಇರುತ್ತಿದೆ.

ಪಂಚಾಕ್ಷರೀಮಹಾಮಂತ್ರಃ ಪ್ರಣವೇನಷಡಕ್ಷರಃ

ಟೀ || ಈ ಪಂಚಾಕ್ಷರಿಯೆಂಬ ಮಹಾಮಂತ್ರವು ಪ್ರಣವದೊಡಗೂಡಿ ಷಡಕ್ಷರವುಳ್ಳಂಥಾದ್ದು.

ಪ್ರಾಜ್ಞತೈಜಸವಿಶ್ವಾಶ್ಚ ಯದಾಯತ್ರಲಯಂಯಯುಃ |
ತದಾಸ್ತಿ ಶತ್ರಮಾದಾಂಬ ಸಾಕಾಷ್ಠಾಖ್ಯಾಪರಾಕಳಾ ||

ಟೀ || ಎಲೈ ಮಾದಾಂಬೆಯೇ ಪ್ರಾಜ್ಞ ತೈಜಸ ಏಶ್ವರುಗಳಾದೊಡೆ ಯಾವ ಕಳೆಯಲ್ಲಿ ಯಾವಾಗ ನಾಶವನ್ನು ಹೊಂದುವರೋ ಆವಾಗ ಆ ಚಿತ್ಕಳೆಯಲ್ಲಿ ಕಾಷ್ಠಾಯೆಂಬ ನಾಮವನ್ನುಳ್ಳ ಕಳೆ ಜನಿಸುತ್ತದೆ. ಆ ಕಳೆಯು ಪರಾಯೆಂಬ ಸಂಜ್ಞೆಯನ್ನುಳ್ಳಂಥಾದ್ದು.

ದೇಹಸ್ಯನಾಸಾರಂಧ್ರೇದ್ವೆ ಈಡಾಪಿಂಗಳಸಂಜ್ಞಕೆ ||
ತಯೋರ್ನಿರೋಧನೆಪ್ರಾಣೊ ಹ್ಯಾಜ್ಞಾಚಕ್ರಂಭಿನತ್ಯಸೌ ||

ಟೀ || ಎಲೇ ಮಾದಾಂಬೆಯೇ ಶರೀರದ ಮೂಗಿನ ರಂಧ್ರಗಳೆರಡು ಈಡೆ ಪಿಂಗಳೆಯೆಂಬ ಹೆಸರುಗಳನ್ನುಳ್ಳವು. ಆ ಈಡಾಪಿಂಗಳೆಗಳನ್ನು ನಿಲ್ಲಿಸುವಲ್ಲಿ ಈ ಪ್ರಾಣಮಾರುತನು ಆಜ್ಞಾಚಕ್ರವನ್ನು ಭೇದಿಸುತ್ತಿಹನಲ್ಲವೆ ?

ತಸ್ಮಿನ್ವಿಭೇದಿತೆಪ್ರಾಣ ಸ್ಸುಷುಮ್ನಾ ಮಾರ್ಗಮಾಸ್ಥಿತಃ |
ಸುಷುಮ್ನಾ ಮಾರ್ಗಗೆಪ್ರಾಣೆ ಭುಜಂಗೀಬೊಧ್ಯತಿಸ್ವಯಂ ||

ಟೀ || ಆಜ್ಞಾಚಕ್ರವು ಭೇದಿಸಲ್ಪಡುತ್ತಿರಲಾಗಿ ಪ್ರಾಣಮಾರುತನು ಸುಷುಮ್ನಾ ನಾಡೀ ಮಾರ್ಗವನೈದಿಸಲ್ಪಡುವನಾಗುವನು. ಪ್ರಾಣಮಾರುತನು ಸುಷುಮ್ನಾ ನಾಡೀ ಮಾರ್ಗವನ್ನೊಂದಲಾಗಿ ಊರ್ಧ್ವಕುಂಡಲಿಯು ತಾನು ಎಚ್ಚರವಾಗುತ್ತಿದೆ.

ಆಧಾರಸ್ಯೋರ್ಧ್ವಭಾಗೇತು ಸ್ವಾಧಿಷ್ಠಾನಾದಧಸ್ಥಿತಾಂ |
ಭಿನತ್ತಿವೈಧಸಗ್ರಂಥಿಂ ತ್ರಿರಾವೃತ್ತಾಂಮಹತ್ತರಾಂ ||

ಟೀ || ಎಲೈ ಮಾದಾಂಬೆಯೇ ಆಧಾರಕ್ಕೆ ಮೇಲಣ ಭಾಗದಲ್ಲಿ ಸ್ವಾಧಿಷ್ಠಾನಚಕ್ರದ ದೆಸೆಯಿಂದ ಕೆಳಗಿರುವಂಥಾ ಮೂರುಸುತ್ತಾಗಿರುತ್ತಿರುವಂಥಾ ಅಧಿಕತರವಾದ ಬ್ರಹ್ಮಗ್ರಂಥಿಯನ್ನು ಊರ್ಧ್ವಕುಂಡಲಿಯು ಭೇದಿಸುತ್ತಿಹುದು.

ಮಣಿಪೂರೊರ್ಧ್ವಭಾಗೇತು ದ್ವಾದಶಾರಾದಧಸ್ಥಿತಾಂ |
ವಿಷ್ಣುಗ್ರಂಥಿಂಭಿನತ್ಯಾಶುಸ್ವಯಂಕುಂಡಲಿನೀಪರಾ ||

ಟೀ || ಮಣಿಪೂರಚಕ್ರಕ್ಕೆ ಮೇಲಣ ಭಾಗದಲ್ಲಿ ಅನಾಹತಚಕ್ರದ ಕೆಳಗಿರುವಂಥಾ ವಿಷ್ಣುಗ್ರಂಥಿಯನ್ನು ಶೀಘ್ರವಾಗಿ ಪರಾಸಂಜ್ಞೆಯನ್ನುಳ್ಳ ಅನಾಹತವೆಂಬ ಹೆಸರುಳ್ಳ ಕುಂಡಲಿಯು ತಾನು ಭೇದಿಸುವದು.

ವಿಶುದ್ಧಸ್ಯೋರ್ಧ್ವಭಾಗೇತು ಆಜ್ಞಾಚಕ್ರಂಸುಶೋಭನಂ |
ತದಂತರಸ್ಥಾವಿಮಲಾ ರುದ್ರಗ್ರಂಥಿವಿಭೇದಿನೀ ||

ಟೀ || ವಿಶುದ್ಧ ಚಕ್ರಕ್ಕೆ ಊರ್ಧ್ವಭಾಗದಲ್ಲಿ ಆಜ್ಞಾಚಕ್ರವು ಶೋಭನವಾಗಿರುವದು. ಆ ಎರಡು ಚಕ್ರಗಳ ಮಧ್ಯದಲ್ಲಿರುವ ನಿರ್ಮಲವಾದ ರುದ್ರಗ್ರಂಥಿಯು ಭೇದಿಸಿಕೊಂಡು ಊರ್ಧ್ವಕುಂಡಲಿಯು ಬೆಳಗುವದು.

ತಸ್ಮಾಚ್ಚಕ್ರಾದ್ವಿನಿಷ್ಕ್ರಮ್ಯ ಸಹಸ್ರಾರಸ್ಥಿತಂಪರಂ |
ಚಂದ್ರಬಿಂಬಂಸಮಾಸಾದ್ಯ ಚಿಚ್ಛಕ್ತಿರುಪಜಾಯತೆ ||

ಟೀ || ಆ ದ್ವಿದಳ ಚಕ್ರದದೆಸೆಯಿಂದ ಹೊರಟುಬಂದು ಸಾವಿರ ದಳವನ್ನುಳ್ಳ ಬ್ರಹ್ಮರಂಧ್ರಸ್ಥಳದ ಚಕ್ರದಲ್ಲಿರುವ ಚಂದ್ರಮಂಡಲವನ್ನೈದಿ ಚಿಚ್ಛಕ್ತಿಯೆಂಬ ಹೆಸರನ್ನುಳ್ಳ ಊರ್ಧ್ವಕುಂಡಲಿಯು ಉತ್ಪತ್ತಿಯಾಗುತ್ತಾಯಿಧೆ.

ಸೈವಸ್ವಾಭಾವಿಕೀ ಶಕ್ತಿಶ್ಶಿವಾಹೈಮವತೀಪರಾ |
ಚಂದ್ರಮಂಡಲಮಧ್ಯಸ್ಥಾ ಶಿವೆನೈವಮಹಾತ್ಮನಾ ||
ಯದಾಯುಕ್ತಾ ಭವೆತ್ಸರ್ವಂತದಾಸರ್ವಂ ನಭಾಸತೆ. |
ನಾಸ್ತಿಕಿಂಚಿಚ್ಛಿವಾದನ್ಯಜ್ಜಗತ್ಸ್ಥಾವರಜಂಗಮಂ ||

ಟೀ || ಆ ಚಿಚ್ಛಕ್ತಿಯೇ ಸ್ವಾಭಾವಿಕೀಶಕ್ತಿ ಎಂದು ಶಿವೆ ಎಂದು ಹೈಮವತಿ ಎಂದು ಪರೆ ಎಂದು ಚಂದ್ರಮಂಡಲ ಮಧ್ಯಸ್ಥೆ ಎಂದು ನಾಮಗಳುಳ್ಳದ್ದಾಗಿ ಯಾವಾಗ ಮಹಾಪುರುಷನಾದ ಸದಾಶಿವನೊಡನೆ ಕೂಡುವಂಥಾದ್ದಾಗಿರುವದೋ ಆವಾಗ ಸಕಲ ಪ್ರಪಂಚವೂ ಕಳೆಗುಂದಿರುವದು. ಸದಾಶಿವನಿಗಿಂತಲೂ ಬೇರೆಯಾದ ಚರಾಚರ ಸ್ವರೂಪವಾದ ಜಗತ್ತು ಸ್ವಲ್ಪವೂ ಇಲ್ಲವು.

ಸರ್ವಂವಿಲಯ ಮಾಪ್ನೋತಿ ದೃಶ್ಯಮಾನಂ ಜಗತ್ಪರಂ |
ನಜಾನಾತಿ ತದಾಯೊಗೀ ಕಾರ್ಯಂ ವಾಕಾರ್ಯಮೆವವಾ ||

ಟೀ || ಎಲೇ ಮೂದಾಂಬೆಯೇ ಕಾಣಲ್ಪಡುತ್ತಿರುವ ಸಕಲ ಜಗತ್ತು ನಾಶವಂ ಹೊಂದಿದಕಾಲದಲ್ಲಿ ಶಿವಯೋಗಿಯು ಮಾಡಬೇಕು ಮಾಡಬಾರದೆಂಬ ವಿಚಾರವನ್ನು ತಿಳಿಯದವನಾಗಿದ್ದಾನೆ.

ಬಾಲಸ್ತ್ವೈಷಗರ್ಭಸ್ಥೊಸ್ಯೆವಂಯೊಗಪರೊಭವತ್ ।
ಸಂಬೊಧಯಾಮ್ಯಹಂದೇವಿ ಗರ್ಭಸ್ಥಂತವ ಪುತ್ರಕಂ ॥

ಟೀ || ಎಲೇ ಮಾದಾಂಬೆಯೇ ನಿನ್ನ ಕುಕ್ಷಿಯಲ್ಲಿರುವ ನಂದಿಕೇಶ್ವರನು ಬಾಲಕನಾದಾಗ್ಯೂ ಈ ಪ್ರಕಾರವಾದ ಯೋಗದಲ್ಲಿ ತತ್ಪರನಾಗಿದ್ದಾನೆ. ಇನ್ನು ನಿನ್ನ ಗರ್ಭದಲ್ಲಿರುವ ಈ ಪುತ್ರನನ್ನು ತಿಳುಹುತ್ತೇನೆ.

ಎವಮುಕ್ತ್ವಸ್ಸಂಗಮೆಶಃ ಸ್ವಯಂಸಾಂಬಸ್ತಿರೊದಧೆ ।
ಸ್ವಪ್ನಾದುತ್ಥಾಯಸಾದೇವೀಮಾದಾಂಬಾಹೃಷ್ಟಮಾನಸಾ ॥
ಬಂಧೂನಾಂಸ್ವಪ್ನ ವೃತ್ತಾಂತಮುವಾಚಾಶೆಷತಸ್ತ್ವಮಂ ।

ಟೀ || ಎಲೈ ಅಗಸ್ತ್ಯನೇ ಈ ಪ್ರಕಾರವಾಗಿ ಮಾದಾಂಬೆಗೆ ಸ್ವಪ್ನದಲ್ಲಿ ಅಂಬಿಕಾಸಹಿತನಾದ ಸಂಗಮೇಶ್ವರನು ತಾನು ಜಂಗ್ಮನಾಗಿ ಬೋಧಿಸಿ ಅಂತರ್ಧಾನನಾದನು. ತರುವಾಯ ಆ ಮಾಬಾಂಬೆಯು ಸಂತುಷ್ಟ ಹೃದಯಳಾಗಿ ನಿದ್ರೆಯಿಂದ ಎಚ್ಚತ್ತು ತಾನು ಸ್ವಪ್ನದಲ್ಲಿ ಕಂಡು ಕೇಳಿದ ಈ ವೃತ್ತಾಂತವೆಲ್ಲವನ್ನು ಸಮಗ್ರವಾಗಿ ತನ್ನ ಬಂಧುಗಳಿಗೆ ಹೇಳಿದಳು.

ಶ್ರುತ್ವಾತೆಬಾಂಧವಾಸ್ಸರ್ವೆ ಪಿತೃಮಾತೃಕುಲೊದ್ಭವಾಃ ।
ಹರ್ಷಸಂಫುಲ್ಲಹೃದಯಾಸ್ಸಾಧು ಸಾಧ್ವಿತಿಚಾಬ್ರುವನ್ ॥

ಟೀ || ಎಲೈ ಅಗಸ್ತ್ಯನೇ ಆ ಮಾದಾಂಬೆಯ ತಂದೆ ತಾಯಿಗಳ ಕುಲದಲ್ಲಿ ಹುಟ್ಟಿದ ಬಂಧುಗಳೆಲ್ಲರೂ ಕೇಳಿ ಸಂತೋಷದಿಂದ ಹೆಚ್ಚಿದ ಮನಸ್ಸುಳ್ಳವರಾಗಿ ಲೇಸುಲೇಸೆಂದು ಸ್ತುತಿಸಿದರು.

ನನೃತುರ್ಮುದಿತಾಃ ಕೆಚಿತ್ಕೇಚಿತ್ಸಂಜಗುರಾದರಾತ್ ।
ಪಾಣಿಸಂತಾಡನಂಚಕ್ರುರ್ಹಾಸಂಕೇಚಿಚ್ಚ ಚಕ್ರಿರೆ ॥

ಟೀ || ಎಲೈ ಅಗಸ್ತ್ಯನೇ ಕೆಲವರು ಸಂತೋಷದಿಂದ ನರ್ತನವಂ ಮಾಡಿದರು ಕೆಲವರು ಪ್ರೀತಿಯಿಂದ ಕೊಂಡಾಡಿದರು. ಮತ್ತೆ ಕೆಲವರು ಹಸ್ತತಾಡನವಂಮಾಡಿದರು. ಕೆಲವರು ಹರ್ಷದಿಂದ ನಕ್ಕರು.

ಏವಂಸಂಬೊಧ್ಯ ಮಾದಾಂಬಾಂ ಸಂಗಮೇಶಃ ಕೃಪಾಕರಃ ।
ತದ್ಗರ್ಭಂಸಮನುಪ್ರಾಪ್ಯ ನಂದಿನಂಸಮಬೋಧಯತ್ ॥

ಟೀ || ಕೃಪಾಕರನಾದ ಸಂಗಮೇಶ್ವರನು ಪೂರ್ವೋಕ್ತ ಪ್ರಕಾರ ವಾಗಿ ಮಾದಾಂಬೆಯನ್ನು ಕುರಿತು ಹೇಳಿ ಆಕೆಯ ಗರ್ಭವನ್ನು ಪ್ರವೇಶಿಸಿ ಅಲ್ಲಿ ಯೋಗಾರೂಢನಾದ ನಂದೀಕೇಶ್ವರನನ್ನು ಬೋಧಿಸಿದನು.

ಭೋಭೋನಂದಿನ್ಮಹಾಭಾಗ ಲೋಕವಂದ್ಯಪದದ್ವಯ |
ಆಜ್ಞಪ್ತಸ್ತ್ವಂಮಯಾಪೂರ್ವಂ ಕಿಮರ್ಥಂಗರ್ಭಮಾಗತಃ ||
ವಿಸ್ಮೃತ್ಯಸರ್ವಂಶ್ಚೈಲಾದೇ ಯೋಗಮಾರ್ಗವಶಂಗತಃ |
ಧ್ಯಾಯನ್ಮಾಂಹೃದಯಾಂತಸ್ಥಮುಷಿತೋವತ್ಸರತ್ರಯಂ ||
ಯದರ್ಥಂತ್ವಂಮಯಾದಿಷ್ಟಸ್ತತ್ಸರ್ವಂ ವಿಸ್ಮೃತೋಸಿಕಿಂ |
ಅತೋನಿಷ್ಕ್ರಮ್ಯಸಹಸಾಕಾರ್ಯಂ ಸಾಧಯಸಾಧಯ ||

ಟೀ || ಎಲೈ ನಂದೀಶ್ವರನೇ ಮಹಾಜ್ಞಾನಿಯಾಗಿಯೂ ಜಗತ್ತಿನಲ್ಲಿ ಸಕಲ ಜನರಿಂದ ನಮಸ್ಕರಿಸುವದಕ್ಕೆ ಯೊಗ್ಯವಾದ ಪಾದಯುಗ್ಮವುಳ್ಳವನಾಗಿಯೂ ಇರುವ ನೀನು ಮೊದಲು ನನ್ನಿಂದ ಆಜ್ಞಾಪಿಸಲ್ಪಟ್ಟವನಾಗಿ ಈ ಮಾದಾಂಬಾಗರ್ಭವನ್ನು ಯಾತಕ್ಕಾಗಿ ಬಂದು ಹೊಕ್ಕೆಯೋ ಅದನ್ನು ಮರೆತು ಯೋಗಮಾರ್ಗಕ್ಕೆ ವಶನಾಗಿ ಸಕಲ ಪ್ರಪಂಚವನ್ನು ಬಿಟ್ಟು ನಿನ್ನ ಹೃದಯದಲ್ಲಿರುವ ನನ್ನನ್ನು ಧ್ಯಾನಿಸಿಕೊಂಡು ಮೂರು ವರ್ಷವನ್ನು ಕಳೆದು ಮೊದಲು ನೀನು ನನ್ನಿಂದ ಯಾವಕಾರ್ಯಕ್ಕಾಗಿ ನಿರೂಪವಂತೆಗೆದುಕೊಂಡೆಯೋ ಅದೆಲ್ಲವನ್ನು ಮರತೆಯೋ ? ನನ್ನ ಕಾರ್ಯವನ್ನು ನಿರ್ವಹಿಸುವದಕ್ಕಾಗಿ ಗರ್ಭದೇಶದಿಂದ ಹೊರಟು ಜಾಗ್ರತೆಯಿಂದ ಮುಂದಣ ಕೆಲಸವನ್ನು ಸಾಧಿಸು.

ಸಂಗಮೆಶೆನ್ನೈವಮುಕ್ತೊನಂದಿಕೆಶೊಮಹಾಮತಿಃ |
ಬುದ್ಧಿಂಚಕ್ರೆವಿನಿರ್ಗಂತುಂಮಾದಾಂಬಾಂ ಗರ್ಭದೇಶತಃ ||

ಟೀ || ಎಲೈ ಅಗಸ್ತ್ಯಮುನಿಯೇ ಈಪ್ರಕಾರವಾಗಿ ಸಂಗಮೇಶ್ವರನಿಂದ ಬೋಧಿಸಲ್ಪಟ್ಟ ಮಹಾಬುದ್ಧಿ ಸಂಪನ್ನನಾದ ನಂದಿಕೇಶ್ವರನು ಮಾದಾಂಬೆಯ ಗರ್ಭಪ್ರದೇಶದ ದೆಶೆಯಿಂದ ಹೊರಡುವದಕ್ಕೋಸ್ಕರ ಉದ್ಯುಕ್ತನಾದನು.

ತತಃಪುಣ ಮುಹೂರ್ತೇತು ಸರ್ವಲಕ್ಷಣ ಸಂಯುತೆ |
ಮಾನಸಿ ತಭ್ಯಗೋಃ ಪುತ್ರಮೆಷಸ್ಥೆ ಚ ದಿವಾಕರೆ ||

ತುಲಾಸ್ಥಿತೇಚ ತತ್ಪುತ್ರೇ ಕಟಕಸ್ಥೇ ಬೃಹಸ್ಪತೌ ।
ಶಶಾಂಕೇರೋಹಿಣೀಸಂಸ್ಥೇ ಮಕರಸ್ಥೇಚಭೂಸುತೇ ॥
ಶಿಶೋರಥೋದಯೇಜಾತೇ ಲಗ್ನೇಕರ್ಕಟಸಂಜ್ಞಿಕೇ ।
ಸಂಗಮೇಶಸ್ತದಾತೂರ್ಣಮದೃಶ್ಯಸ್ತಂಸಮಾಯಯೌ ॥

ಟೀ ॥ ಎಲೈ ಅಗಸ್ತ್ಯನೇ ಆ ನಂದೀಶ್ವರನು ಹೃತ್ಪಂಕಜದಿಂದ ಬಹಿರ್ಗತವಾಗುವ ಬುದ್ಧಿಯದೆಸೆಯಿಂದ ಪುಣ್ಯಮುಹೂರ್ತವು ಸಮಸ್ತ ಲಕ್ಷಣದೊಡನೆ ಕೂಡಲಾಗಿ ಮೀನರಾಶಿಯಲ್ಲಿ ಶುಕ್ರನು ಮೇಷದಲ್ಲಿ ಸೂರ್ಯನು, ತುಲಾರಾಶಿಯಲ್ಲಿ ಶನಿಯು ಕಟಕರಾಶಿಯಲ್ಲಿ ಗುರುವು ರೋಹಿಣಿಯಲ್ಲಿ ಚಂದ್ರನು ಮಕರದಲ್ಲಿ ಅಂಗಾರಕನು ಇರಲಾಗಿ ಕಟಕ ಲಗ್ನ ಹುಟ್ಟುತ್ತಾ ಇರಲಾಗಿ ಶಿಶುರೂಪವಾದ ನಂದೀಶ್ವರನು ಆಕೆಯ ಬ್ರಹ್ಮರಂಧ್ರಾಂತರ್ಗತನಾಗಿದ್ದು ಉದಯವಾಗುವ ಸಮಯದಲ್ಲಿ ಸಂಗಮೇಶ್ವರನು ಜಾಗ್ರತೆಯಾಗಿ ಒಬ್ಬರಿಗೂ ಕಾಣಿಸದೆ ಇರುವವನಾಗಿ ಪುತ್ರನನ್ನು ಕುರಿತು ಬಂದನು.

ಭೂತಿಪಟ್ಟಂತತಶ್ಚಕ್ರೇಸ್ವಹಸ್ತೇನೈವದೇಶಿಕಃ ।
ನಿಕ್ಷಿಪ್ಯಮಸ್ತಕೇಹಸ್ತಂಶಸ್ಯಪದ್ಮಸಮಪ್ರಭಂ ॥

ಟೀ ॥ ಎಲೈ ಅಗಸ್ತ್ಯನೇ ಅನಂತರದಲ್ಲಿ ಸಂಗಮೇಶ್ವರನು ತಾವರೆಹೂವಿಗೆ ಸಮಾನವಾದ ಕಾಂತಿಯುಳ್ಳ ಹಸ್ತವನ್ನು ಆ ನಂದೀಶ್ವರನ ಮಸ್ತಕದಲ್ಲಿರಿಸಿ ಹಣೆಯಲ್ಲಿ ವಿಭೂತಿ ಪಟ್ಟವನ್ನು ಮಾಡಿದನು.

ತಮಃ ಪಟಲಮುತ್ಸಾರ್ಯ ತತ್ಕಾರಣ ಶರೀರಗಂ ।
ಶೈವೀಂಕಳಾಂಸಮಾಕೃಷ್ಯಪರಾತ್ಪರತರಾಂಗುರುಃ ॥

ಟೀ ॥ ಎಲೈ ಅಗಸ್ತ್ಯನೇ ಸಂಗಮೇಶ್ವರನೆಂಬ ಗುರುಸ್ವಾಮಿಯು ಪುತ್ರನ ಕಾರಣಶರೀರಾಂತರ್ಗತವಾದ ತಮೋಗುಣ ಚೇಷ್ಟೆಗಳ ಸಮೂಹವಂ ದಾಟಿಸಿ ಅತ್ಯಧಿಕವಾದ ಶಿವಸಂಬಂಧಿಯಾದ ಜ್ಞಾನದ ಕಳೆಯನ್ನು ಸೆಳೆದುಕೊಂಡು.

ಶಿಶೋರ್ಭಾವೇನ ಸಂಯೋಜ್ಯಮನಸಾಯೋಜಯತ್ಸ್ವಯಂ ।
ಮನಸಾದೃಷ್ಟಿದೇಶಂತು ನೀತ್ವಾತಾಂ ಪರಮಾಂಕಳಾಂ ॥

ಟೀ || ಆ ಚಿತ್ಕಳೆಯನ್ನು ಶಿಶುವಿನ ಭಾವದೊಡಗೂಡಿಸಿ ಅಲ್ಲಿಂದ ಮನಸ್ಸಿಗೆತಂದು ಪರಶಿವಮೂರ್ತಿಯು ಉತ್ಕೃಷ್ಟವಾದ ಆ ಚಿತ್ಕಳೆಯನ್ನು ಮನಸ್ಸಿನಿಂದ ನೇತ್ರಸ್ಥಾನವನ್ನೊಂದಿಸಿದನು.

ಷಡಧ್ವಶೋಧಿತಂಲಿಂಗಂ ಚಂದ್ರಕಾಂತಶಿಲಾಮಯಂ |
ನೀತ್ವಾತತ್ರಕಳಾಂಸೂಕ್ಷ್ಮಾಂ ಸನ್ನಿವೇಶ್ಯಕೃಪಾನಿಧಿಃ ||

ಟೀ || ಕರುಣೆಗೆ ನಿಕ್ಷೇಪನಾದ ಸಂಗಮೇಶ್ವರನು ಷಡಧ್ವಗಳಿಂದ ಪರಿಶುದ್ಧಮಾಡಲ್ಪಟ್ಟ ಚಂದ್ರಕಾಂತಶಿಲಾ ಸ್ವರೂಪವಾದ ಇಷ್ಟಲಿಂಗ ವಂ ತಂದು ಆ ಲಿಂಗದಲ್ಲಿ ಸೂಕ್ಷ್ಮವಾದ ಚಿತ್ಕಳೆಯನ್ನು ನಿಲ್ಲಿಸಿ.

ಶೈವೀಂಪಂಚಾಕ್ಷರೀಂಪುಣ್ಯಾಂಪ್ರಣವೇನಸಮನ್ವಿತಾಂ |
ನಿಗೂಢಂದಕ್ಷಿಣೆಕರ್ಣೇ ಜಜಾಪಪರಮೇಶ್ವರಃ ||

ಟೀ || ಓಂಕಾರದೊಡನೆ ಕೂಡಲ್ಪಟ್ಟ ಪುಣ್ಯಸ್ವರೂಪವಾದ ಶಿವಸಂಬಂಧಿಯಾದ ಪಂಚಾಕ್ಷರೀಮಂತ್ರವನ್ನು ಆ ಶಿಶುವಿನ ಬಲದ ಕಿವಿಯಲ್ಲಿ ಪರಮೇಶ್ವರನು ರಹಸ್ಯವಾಗಿ ಉಪದೇಶಿಸಿದನು.

ತತಸ್ತತ್ಕಂಠದೇಶೇತುಚಕ್ರೇಲಿಂಗಸ್ಯಧಾರಣಂ |
ಕೃತ್ವೈವಂಚಿನ್ಮಯೀಂದೀಕ್ಷಾಂ ಸರ್ವಶಾಸ್ತ್ರೇಷುಗೋಪಿತಾಂ ||

ಟೀ || ಆ ಮೇಲೆ ಸಂಗಮೇಶ್ವರನು ಆ ನಂದಿಕೇಶನ ಕಂಠಸ್ಥಾನದಲ್ಲಿ ಇಷ್ಟಲಿಂಗವನ್ನು ಧರಿಸಿ ಸಕಲ ಶಾಸ್ತ್ರಗಳಲ್ಲಿಯೂ ರಹಸ್ಯವಾಗಿರುವ ಜ್ಞಾನಸ್ವರೂಪವಾದ ಶಿವದೀಕ್ಷೆಯನ್ನು ಈ ಪ್ರಕಾರವಾಗಿ ಮಾಡಿದನು.

ಬಾಲೇಂದುವಿಲಸನ್ಮೂರ್ಧಾ ಫಾಲಭಾಗಸ್ಥಲೋಚನಃ |
ಕಾಷಾಯಕಂಥಾಸಂಛನ್ನ ದೀಪ್ಯಮಾನತನುರ್ಭೃಶಂ ||
ತಾಮ್ರಕುಂಡಲಸಂಶೋಭಿ ಕರ್ಣದ್ವಂದ್ವವಿರಾಜಿತಃ |
ಭಕ್ತವೇಷಧರಶ್ರೀಮಾನ್ ಸಂಗಮೇಶಃಪರಾತ್ಪರಃ ||
ಪಶ್ಯಂತೀಷುಚಕಾಂತಾಸು ಮಾದಾಂಬಾಮಾಹದೇಶಿಕಃ |

ಟೀ || ಬಾಲಚಂದ್ರನಿಂದ ಪ್ರಕಾಶಿಸುವ ಮಸ್ತಕವನ್ನುಳ್ಳಂಥ ಲಲಾಟಸ್ಥಳದಲ್ಲಿರುವ ನೇತ್ರವನ್ನುಳ್ಳ ದೃಢವಾಗಿ ಕಾಷಾಯವಸ್ತ್ರದಿಂದ ಆಛ್ಛಾದಿಸಲ್ಪಟ್ಟದ್ದಾಗಿಯೂ, ಪ್ರಕಾಶಮಾನವಾಗಿಯೂ ಇರುವ

ಶರೀರ ವುಳ್ಳಂಥ, ತಾಮ್ರಮಯವಾದ ಕುಂಡಲಗಳಿಂದ ಶೋಭಿಸುತ್ತಿರುವ ಎರಡು ಕಿವಿಗಳಿಂದ ಮೆರೆಯುವಂಥ, ಶಿವಯೋಗಿಯ ವೇಷವನ್ನು ಧರಿಸಿರುವಂಥ, ಷಡ್ಗುಣೈಶ್ವರ್ಯ ಸಂಪನ್ನನಾದಂಥ, ಸರ್ವೋತ್ತಮನಾದಂಥ, ಗುರು ಸ್ವರೂಪನಾದಂಥ, ಸಂಗಮೇಶ್ವರನು ಆ ಗೃಹದಲ್ಲಿರುವ ಸಮಸ್ತ ಸ್ತ್ರೀಯರು ನೋಡುತ್ತಿರುವಾಗಲೇ ಮಾದಾಂಬೆಯನ್ನು ಕುರಿತು ಹೇಳಿದನು. ಏನೆಂದರೆ :—

ಅಯಿಭದ್ರೇಮಹಾಭಾಗೆ ಶಿಶೋರಸ್ಯಮಹಾಮತೇಃ |
ನಕದಾಪಿಪಯೋದೇಹಿ ಲಿಂಗಮೂರ್ತೇರನರ್ಪಿತಂ ||

ಎಲೌ ಮಂಗಳ ರೂಪಿಯಾಗಿಯೂ, ಪತಿವ್ರತಾ ಶಿರೋಮಣಿಯಾಗಿಯೂ, ಇರುವ ಮಾದಾಂಬೆಯೇ ಬಾಲ್ಯಾವಸ್ಥೆಯಲ್ಲಿದ್ದಾಗ್ಯೂ, ಊಹಾಪೋಹಾದಿವ್ಯಾಪಾರಗಳಲ್ಲಿ ಸಮರ್ಥವಾದ ಬುದ್ಧಿಯುಳಂಥ, ಈ ಮಗುವಿಗೆ ಯಾವ ಸಮಯದಲ್ಲಿಯಾಗಲಿ ದೀಕ್ಷಾಪೂರ್ವಕವಾಗಿ ನನ್ನಿಂದ ಧರಿಸಲ್ಪಟ್ಟ ಶಿವಲಿಂಗಕ್ಕೋಸುಗ ಅರ್ಪಿಸಲ್ಪಡದೆ ಇರುವ ಸ್ತನ್ಯವನ್ನು ಕೊಡಬೇಡ. " ರುದ್ರೇಣಾತ್ತಮಶ್ನಂ ತಿರುದ್ರೇಣಪೀತಂ ಪಿಬಂತಿರುದ್ರೇಣಾಘ್ರಾತಂಜಿಘ್ರಂತಿ ತಸ್ಮಾದ್ಬ್ರಾಹ್ಮಣಾಃಪ್ರಶಾಂತಮನಸಾವಿದ್ವಾಂಸೋನಿರ್ಮಾಲ್ಯಮೇವಭಕ್ಷಯಂತಿ ನಿರ್ಮಾಲ್ಯಮೇವನಿಷೇವಂತೆನಿರ್ಮಾಲ್ಯಮೇವಾಶ್ನೀಯಾತ್ | ಭುಂಜೀಯಾದ್ರುದ್ರಭುಕ್ತಾನ್ನಂ ರುದ್ರಪೀತಂಜಲಂ ಪಿಬೇತ್ || ರುದ್ರಾಘ್ರಾತಂಸದಾಜಿಘ್ರೇದಿತಿಜಾಬಾಲಕೀಶ್ರುತಿಃ | ಅರ್ಪಯಿತ್ವಾನಿಜೆಲಿಂಗೆ ಪತ್ರಪುಷ್ಪಂಫಲಂಜಲಂ || ಅನ್ನಾದ್ಯಂಸರ್ವಭೋಜ್ಯಂಚ ಸ್ವೀಕುರ್ಯಾದ್ಭಕ್ತಿಮಾನ್ನರಃ || " ಇತ್ಯಾದಿ ಪ್ರಮಾಣಗಳಿರುವದರಿಂದ ಲಿಂಗಾನರ್ಪಿತವಾದ ಯಾವ ವಸ್ತುವಾದರೂ ವೀರಶೈವ ಬ್ರಾಹ್ಮಣರಿಗೆ ಗ್ರಾಹ್ಯವಲ್ಲದ ಕಾರಣ ತದ್ವ್ರತಪಾಲನಾರ್ಥವಾಗಿ ಸ್ತನ್ಯವನ್ನು ಲಿಂಗಕ್ಕೆ ಸಮರ್ಪಿಸಿ, ಅನಂತರ ಬಾಲಕನಿಗೆ ಕೊಡುವಂತೆ ನಿರೂಪಿಸಿದನೆಂದು ತಾತ್ಪರ್ಯಾರ್ಥ.

ವಿಶ್ವಂವಸತಿಯತ್ರೈತದ್ವಸತ್ಯತ್ರಮಹೇಶ್ವರಃ |
ತತ್ರೈವಬಾಲಕಶ್ಶ್ರೀಮಾರ್ಗ ಮನೋವಾಕ್ಕಾಯಕರ್ಮಭಿಃ ||

ಆದ್ಯಸ್ಯಚವಕಾರಸ್ಯ ಹ್ಯಭೇದೇನಬಕಾರತಃ |
ಏಷೋಯಂಬಾಲಕಶ್ರೀಮಾನ್ ಬಸವೇಶ್ವರನಾಮಧೃತ್ ||
ಪರಾತ್ಪರತರೇಲಿಂಗೇಯೇವಸಂತಿಮಹೇಶ್ವರಾಃ |
ಗಚ್ಛತ್ಯೇತಾನ್ ಸ್ವಯಂಭಕ್ತ್ಯಾ ತೇನಾಯಂಬಸವೇಶ್ವರಃ ||
ಗತ್ಯರ್ಥಕತ್ವಾಧಾತೋ ರೇತದರ್ಥದ್ವಯಂಸ್ಥಿತಂ |
ಮಹತ್ಸಂಸಾರಚಕ್ರೇಸ್ಮಿನ್ ಯೇವಸಂತಿಚದುರ್ಜನಾಃ ||
ತಾನ್ ಗಂಧತೇಸದಾಬಾಲೋ ವಿಶ್ವರಕ್ಷಣತತ್ಪರಃ |
ಹಿಂಸಾಗಂಧನಶಬ್ದೇನ ಪ್ರೋಚ್ಯತೇವರವರ್ಣಿನಿ ||
ಸರ್ವದಾತನಬಾಲೋಯಂ ಬಸವೇಶಇತೀರ್ಯತೇ |

ಟೀ. || ಸ್ಥಾವರಜಂಗಮಾತ್ಮಕವಾದೀಪ್ರಪಂಚವು ಯಾವ ಪರಶಿವನಲ್ಲಿ ವಾಸಿಸುತ್ತದೋ ಅಂಥಾ ಪರಶಿವನ ಹೃದಯಕಮಲದಲ್ಲಿಯೂ, ಸದ್ಗುಣಸಂಪನ್ನನಾದ ಈ ನಿನ್ನ ಪುತ್ರನು, ಮನಸ್ಸಿನಿಂದಲೂ, ವಾಕ್ಕಿನಿಂದಲೂ, ಕಾರ್ಯದಿಂದಲೂ, ವಾಸಿಸುತ್ತಾನೆ. ಮತ್ತು ಬಸವ ಎಂಬುವಲ್ಲಿ ಮೊದಲು ಇರತಕ್ಕ ವಕಾರಕ್ಕೆ ಅಭೇದವಾಗಿ ಬಕಾರವು ಬಂದಿರುವದರಿಂದ ಈ ಬಾಲಕನು ಬಸವನೆಂಬ ನಾಮಧೇಯವನ್ನು ಧರಿಸಿದ್ದಾನೆ.

ಲೀಯತೇಗಮ್ಯತೇಯತ್ರ ಜಗದೇತಚ್ಚರಾಚರಂ|
ತೇನೇದಂಲಿಂಗಮಿತ್ಯಾಹುರಾಗಮಾರ್ಥವಿಶಾರದಾಃ ||

ಎಂಬ ವಚನದಿಂದ ಈ ಜಗತ್ತಿನ ಉತ್ಪತ್ತಿ ಸ್ಥಿತಿಲಯಗಳಿಗೆ ಆಶ್ರಯವಾದ ಅಥವಾ ಲೀನಮರ್ಥಂಗಮಯತಿ–ಅಂದರೆ ಇಂದ್ರಿಯಗಳಿಂದ ಗೋಚರವಾಗದಿರುವ ಪರತತ್ವವನ್ನು ತೋರಿಸುವದೆಂಬ ಉತ್ಪತ್ತಿಯಿಂದ ಸಿದ್ಧವಾದ ಸರ್ವೋತ್ತಮವಾದ ಲಿಂಗದಲ್ಲಿ ಯಾವ ಪ್ರಮಥರು ವಾಸಿಸುತ್ತಾರೋ ಅವರನ್ನು ಈ ಪುತ್ರನು ಭಕ್ತಿಯಿಂದ ಹೊಂದುತ್ತಾನೆ. ಆದ್ದರಿಂದ ವಸಂತಿ ಲಿಂಗೆ ಇತಿವಸಾಃ, ಗಣಾಃ ತಾನ್ ವಾತಿಗಚ್ಛತಿ ಎಂಬ ಅರ್ಥದಿಂದ ಬಸವನೆಂಬ ಅಭಿಧಾನವುಳ್ಳವನಾಗಿದ್ದಾನೆ. ವಾಧಾತುವಿಗೆಗತ್ಯರ್ಥಕತ್ವ ವಿರುವದರಿಂದ ಈ ಎಡರು ಅರ್ಥಗಳು ಬಸವ ಎಂಬ ನಾಮದಲ್ಲಿರುತ್ತವೆ. ಮತ್ತು ವಾಗತಿಗಂಧನಯೋಃ ಎಂದು ವಾಧಾತುವಿಗೆ ಗಂಧನ ಅಂದರೆ ಹಿಂಸೆ ಎಂಬರ್ಥವಿರುವದರಿಂದ, ಪ್ರಾರಬ್ಧ, ಸಂಚಿತ,

ಆಗಾಮಿರೂಪಗಳಾದ ಕರ್ಮಗಳಿಗನುಗುಣವಾಗಿ ತಿರುಗುತ್ತಿರುವ ಈ ಜನನ ಮರಣಾತ್ಮಕವಾದ ಸಂಸಾರವೆಂಬ ಚಕ್ರದಲ್ಲಿ ಯದಾಚರ್ಮವದಾಕಾಶಂ ವೆಷ್ಟಯಿಷ್ಯಂತಿಮಾನವಾಃ ತದಾಶಿವಮವಿಜ್ಞಾಯ ದುಃಖಸ್ಯಾಂತೋಭವಿಷ್ಯತಿ'' ಎಂಬುವದು ಮೊದಲಾದ ಪ್ರಮಾಣಗಳು ಪರಸ್ಸಹಸ್ರವಿದ್ದಾಗ್ಯೂ ಯೋಚಿಸದೆ ಮತಾಂತರ ಪ್ರವಿಷ್ಟರಾಗಿ, ಶಿವನನ್ನೂ ಶಿವಭಕ್ತರನ್ನೂ, ಭಸ್ಮ ರುದ್ರಾಕ್ಷ ಲಿಂಗಧಾರಣಾದಿ ಶಿವ ಧರ್ಮಗಳನ್ನೂ ದೂಷಿಸುತ್ತಿರುವ ಯಾವ ದುರ್ಜನರು ವಾಸಿಸುತ್ತಾರೋ ಅಂಥವರನ್ನು ಜಗತ್ಪಾಲನಶೀಲನಾದ ಈ ಬಾಲಕನು, '' ಶಿವನಿಂದಾಕರಂದೃಷ್ಟ್ವಾ ಘಾತಯೆದಥವಾಶಪೆತ್ ಸ್ಥಾನಂವಾತತ್ಪರಿತ್ಯಜ್ಯಗಚ್ಛೆದ್ಯದ್ಯಕ್ಷಮೊಭವೆತ್ '' ಎಂಬ ವಚನಾನುಸಾರವಾಗಿ ಶಿಕ್ಷಿಸುತ್ತಾನೆ. ಆದಕಾರಣ ಎಲೌ ಶೋಭನಾಂಗಿಯೇ ಈ ನಿನ್ನಮಗನು ವಸಂತಿ ಸಂಸಾರ ಚಕ್ರೆಸ್ಮಿನ್ನಿತಿವಸಾಃ ದುಷ್ಟಾಃ ತಾನ್ ವಾತಿಗಂಧತಇತಿ ಬಸವಃ ಎಂಬ ವ್ಯುತ್ಪತ್ತಿಯಿಂದ ಯಾವಾಗಲೂ, ಬಸವನೆಂದು ಕರೆಯಲ್ಪಡುತ್ತಾನೆ.

ಕೂಡಲೀಸಂಗಮೇಶೊಹಂ ಮಾದಾಂಬೆವರವರ್ಣಿನಿ ।
ಕಪ್ಪಡೀಸಂಗಮೆಶಾಖ್ಯಪಟ್ಟಣೆನಿವಸಾಮ್ಯಹಂ ।
ಮತ್ಪುತ್ರೊಯಂ ಮಹಾಭಾಗೆ ಲೋಕಪಾಲನತತ್ಪರಃ ।
ಶಿವಭಕ್ತಿಪರೊನಿತ್ಯಂತವಪುತ್ರತ್ವಮಾಪಸಃ ॥
ತಸ್ಮಾದೆನಂಮಹಾಭಾಗೆ ದಿದೃಕ್ಷುರಹಮಾಗತಃ ॥
ಗುರುರೂಪಧರೊಹ್ಯತ್ರ ಸರ್ವಕಾಲೆವಸಾಮ ಹಂ ॥

ಟೀ ॥ ಎಲೌ ಸುಚರಿತ್ರಳಾದ ಮಾದಾಂಬೆಯೇ ನಾನು ಕೂಡಲೀಸಂಗಮನಾಥನು. ಕಪ್ಪಡಿಸಂಗಮ ಎಂಬ ಹೆಸರುಳ್ಳ ಪಟ್ಟಣದಲ್ಲಿ ವಾಸಿಸುತ್ತೇನೆ. ಶಿವಭಕ್ತಿಧುರಂಧರನಾದ ಈ ಶಿಶುವು ನನ್ನ ಮಗನು. ಬೌದ್ಧ, ಚಾರ್ವಾಕ, ಲೋಕಾಯತಿಕಾದಿ ದುರ್ಮತಗಳು ಭೂಲೋಕದಲ್ಲಿ ಹೆಚ್ಚಿ ಶೈವಮತ ಪ್ರಚಾರವು ಕಡಿಮೆಯಾದ್ದರಿಂದ, ಆ ದುರ್ಮತಗಳನ್ನೆಲ್ಲಾ ಖಂಡಿಸಿ, ವೀರಶೈವಮತವನ್ನು ಸ್ಥಾಪಿಸಿ, ಭೂಲೋಕವನ್ನು ರಕ್ಷಿಸುವದಕ್ಕೋಸ್ಕರ ನಿನಗೆ ಪುತ್ರನಾಗಿ ಹುಟ್ಟಿದ್ದಾನೆ. ಆದ್ದರಿಂದ ಈತನನ್ನು ನಾನು ನೋಡಲಿಚ್ಛೆಯಿಂದ ಬಂದೆನು. ನಿರಂತರದಲ್ಲೂ ನಾನು

ಗುರುರೂಪವನ್ನು ಧರಿಸಿಕೊಂಡು, ಈತನ ಬಳಿಯಲ್ಲಿಯೇ ವಾಸಮಾಡಿ ಕೊಂಡಿದ್ದೇನೆ.

ಏವಮಾಜ್ಞಾಪ್ಯಸಹಸಾ ಸಂಗಮೇಶಸ್ತಿರೋದಧೆ ॥
ತತ್ರಾರಿಷ್ಟಗೃಹಾಂತಸ್ಥಾ ವನಿತಾಃ ಪಂಕಜೇಕ್ಷಣಾಃ ।
ಅನ್ಯೋನ್ಯಮೂಚಿರೇವೋಹಾ ದ್ವಿಸ್ಮಯಾವಿಷ್ಟಚೇತಸಃ ॥

ಟೀ ॥ ಈ ಪ್ರಕಾರವಾಗಿ ಸಂಗಮೇಶ್ವರನು ಮಾದಾಂಬೆಯನ್ನು ಕುರಿತು ನಿರೂಪಿಸಿ, ಜಾಗ್ರತೆಯಲ್ಲಿ ಅಂತರ್ಧಾನನಾದನು. ಆಗ ಸೂತಿ ಕಾಗೃಹದೊಳಗಿದ್ದ ಕಮಲದಳ ಸದೃಶವಾದ ನೇತ್ರಗಳುಳ್ಳ ಸ್ತ್ರೀಯರೆ ಲ್ಲರೂ, ಆಶ್ಚರ್ಯಭರಿತವಾದ ಮನಸ್ಸುಳ್ಳವರಾಗಿ ಬೆರಗುಗೊಂಡು ಮುಂದೆ ಹೇಳುವ ಪ್ರಕಾರವಾಗಿ ಮಾತಾಡಿಕೊಂಡರು. ಏನಂದರೆ :—

ಇದಾನೀಮಾಗತಃಕೋಯಮಯೋಗ್ಯಂಸೂತಿಕಾಗೃಹಂ ।
ಲೋಕೇಸ್ಮಿನ್ಪುರುಷಾಸ್ಸರ್ವೇ ನವಿಶಂತಿಕದಾಚನ ॥
ಕಥಂವಾಂತರ್ದಧೇತೂರ್ಣ ಮಾಶ್ಚರ್ಯಮಿವಭಾತಿನಃ ।
ಮಾದಾಂಬಾನುಗ್ರಹಾರ್ಥಾಯ ಶಿವಃಕಿಂಸಮುಪಾಗತಃ ॥

ಟೀ ॥ ಈಗ, ಈ ಹೆರಿಗೆಯ ಮನೆಗೆ ಬಂದಿದ್ದವನು ಯಾರು? ಈ ಲೋಕದಲ್ಲಿರುವ ಸಮಸ್ತ ಪುರುಷರೂ, ಎಂದಿಗೂ ಹೆರಿಗೆಯ ಮನೆಗೆ ಪ್ರವೇಶಿಸುವುದಿಲ್ಲ. ಹ್ಯಾಗೆ ಅದೃಶ್ಯನಾದನು. ನಮಗೆ ಬಹಳ ಆಶ್ಚರ್ಯ ವಾಗಿ ತೋರುತ್ತೆ. ಭಕ್ತಿಗೆ ನಿಧಿಯಾದ ಮಾದಾಂಬೆಯ ವಿಶ್ವಾಸಕ್ಕೆ ಮೆಚ್ಚಿ ಈಕೆಯನ್ನು ಉದ್ಧರಿಸುವದಕ್ಕಾಗಿ ತ್ರಿಭುವನೇಶ್ವರನಾದ ಷಡಂಗ ಕಲ್ಯಾಣಗುಣವಿಶಿಷ್ಟನಾದ ಪರಶಿವನೇ ಏನಾದರೂ ಬಂದಿದ್ದನೊ.

ಲಿಂಗಧಾರಣಮೇತದ್ಧಿ ಗರ್ಭಸ್ಥಸ್ಯಶಿಶೋಃಕಥಂ ।
ನದೃಷ್ಟಂನಶ್ರುತಂಪೂರ್ವಂ ಮಹತ್ಯಸ್ಮಿನ್ಮಹೀತಲೆ ॥
ಲೋಕೇಯೆಶಿಶವೋಜಾತಾ ಸ್ಸರ್ವೇವರ್ಣಾನುಸಾರತಃ ।
ತೇಷಾಂನಾಸ್ತೀದೃಶಂರೂಪಂ ಸರ್ವನೇತ್ರಾವಕುಂಠಕಂ ॥

ಟೀ ॥ ಲೋಕದಲ್ಲಿ ವೀರಶೈವಮತಸ್ಥರ ಶಿಶುಗಳಿಗೆ ಗರ್ಭದಿಂದೀಚೆಗೆ ಹೊರಟಮೇಲೆ, ಲಿಂಗಧಾರಣವೆಂಬುವದು ಪ್ರಸಿದ್ಧವೇ ಸರಿ, ಈ ಶಿಶುವಿಗೆ ಗರ್ಭದಲ್ಲಿರುವಾಗಲೇ ಲಿಂಗಧಾರಣವಾಗಿದೆಯಲ್ಲಾ; ಈ ವಿಸ್ತೀರ್ಣವಾದ

ಭೂಮಂಡಲದಲ್ಲಿ ಎಲ್ಲಿಯಾದರೂ ನೋಡಿಲ್ಲ, ಮತ್ತು ಯಾರೂ ಕೇಳಿಲ್ಲ. ಜಗತ್ತಿನಲ್ಲಿರುವ ಮಕ್ಕಳು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಎಂಬ ತಮ್ಮ ತಮ್ಮ ಜಾತಿಗೆ ಸರಿಯಾದ ರೂಪಾದಿಗುಣಗಳುಳ್ಳವುಗಳಾಗಿ ಹುಟ್ಟುತ್ತವೆ. ನೋಡತಕ್ಕವರ ನೇತ್ರಗಳನ್ನು ಮುಚ್ಚಿಸುವಷ್ಟು ಅತಿಶಯವುಳ್ಳ ಇಂಥಾಸೌಂದರ್ಯವು ಆ ಶಿಶುಗಳಿಗೆ ಇರುವದಿಲ್ಲ.

ಪ್ರಸರಂತಿನನೇತ್ರಾಣಿ ಬಾಲಸ್ಯತನುವೀಕ್ಷಣೆ ।
ಯಥಾನಿದಾಘಮಧ್ಯಾಹ್ನ ಭಾನುಬಿಂಬಂಮಹೋಜ್ವಲಂ ॥
ನಶಕ್ಯಮಿಾಕ್ಷಿತುಂತದ್ವದ್ಬಾಲೋನಪ್ರೇಕ್ಷಿತುಂಕ್ಷಮಃ ।
ಆತೋಮಾದಾಂಬಿಕಾಭಾಗ್ಯಗೌರವೇಣಮಹೇಶ್ವರಃ ।
ಸರ್ವಲೋಕೈಕಕರ್ತಾಯಂ ಶಿವೋಜಜ್ಞೆನಸಂಶಯಃ ॥

ಟೀ ॥ ಮಹಾತೇಜಸ್ವಿಯಾದ ಈ ಮಗುವಿನ ಶರೀರವನ್ನು ನೋಡುವದರಲ್ಲಿ ಕಣ್ಣುಗಳು ಪ್ರಸರಿಸುವದಿಲ್ಲ ಬೇಸಿಕೆಯಕಾಲದ ಮಧ್ಯಾಹ್ನದಲ್ಲಿ ಪ್ರಜ್ವಲಿಸುವ ಸೂರ್ಯಮಂಡಲವನ್ನು ನೋಡುವದಕ್ಕೆ ಹ್ಯಾಗೆ ಆಗುವದಿಲ್ಲವೋ ಹಾಗೆಯೇ ಈ ಬಾಲಕನನ್ನು ನೋಡುವದಕ್ಕಾಗುವದಿಲ್ಲ. ಆದಕಾರಣ, ಅಮಾನುಷಮಾದ ಈತನ ಕಾಂತಿಯನ್ನು ನೋಡಿದರೆ ಮಾದಾಂಬೆಯ ಭಾಗ್ಯಾಧಿಕ್ಯದಿಂದ, ಭೂಮ್ಯಾದಿಸಮಸ್ತಲೋಕಗಳಿಗೆ ಸೃಷ್ಟಿ, ಸ್ಥಿತಿ, ಸಂಹಾರ, ತಿರೋಭಾವ, ಅನುಗ್ರಹಗಳಂ ಮಾಡುವ್ವದರಿಂದ ಪ್ರಭುವಾದಂಥ, ಭಕ್ತವತ್ಸಲನಾದಂಥ, '' ತಸ್ಯಭಾಸಾಸರ್ವಮಿದಂ '' ಎಂಬ ಶ್ರುತಿಪ್ರಮಾಣದಿಂದ ತನ್ನ ಪ್ರಕಾಶದಿಂದ ಸಕಲಲೋಕವನ್ನು ಬೆಳಗುವಂಥ, ಬ್ರಹ್ಮವಿಷ್ಣು, ಮೊದಲಾದ ದೇವತೆಗಳಿಂದಲೂ ಪೂಜೆಗೊಳ್ಳುವಂಥ, ಅಪರಿಮಿತ ಮಹಿಮನಾದಂಥ ಕಲ್ಯಾಣಗುಣ ಮಣಿಕರಂಡನಾದಂಥ, ಪರಶಿವನೇ ಪುತ್ರರೂಪದಿಂದ ಅವತರಿಸಿದ್ದಾನೆಂದು ತಿಳಿಯಬರುತ್ತೆ. ಈ ವಿಷಯದಲ್ಲಿ ಸಂದೇಹವೇನು ?

ಅಥವಾಷಣ್ಮುಖಸ್ಸೋಯಂ ಶಾರಕಾಸುರಮಾರಕಃ ।
ಭೃಂಗ್ಯಾದಿಪ್ರಮಥಾನಾಂಚ ಮಧ್ಯೆಕಶ್ಚಿನ್ಮಹತ್ತರಃ ।
ಸಂಜಾತಃಪುತ್ರರೂಪೇಣ ಮಾದಾಂಬಾಯಾಮನುಗ್ರಹಾತ್ ॥

ಟೀ || ಹಾಗಲ್ಲದಿದ್ದರೆ, ಪೂರ್ವದಲ್ಲಿ ದೇವತೆಗಳೆಲ್ಲಾ ಕೂಡಿ, ಈಶ್ವರನಕುರಿತು ತಪಸ್ಸುಮಾಡಲು, ಶಿವನುಪ್ರತ್ಯಕ್ಷನಾಗಿ ನಿಮ್ಮಮನೋರಥವೇನೆಂದು ಕೇಳುವಲ್ಲಿ. ನೀನು ಸಕಲ ಪ್ರಪಂಚಕ್ಕೂ ಸೃಷ್ಟಿಕರ್ತನಾಗಿರುವದಲ್ಲಡೆ, ನಮ್ಮಲ್ಲಿ ಕೇವಲ ಕೃಪೆಯುನ್ನಿಟ್ಟಿರುವದರಿಂದ ನೀನೇ ನಮಗೆ ತಂದೆಯಾಗಿದ್ದೀ ನಾವೆಲ್ಲರು ನಿನ್ನ ಮಕ್ಕಳು. ಆದ್ದರಿಂದ ಬೇರೆ ನಿನಗೆ ಮಕ್ಕಳು ಆಗಕೂಡದೆಂದುವರವನ್ನ ಕೇಳಿಕೊಂಡಿರುವ ವರ್ತಮಾನವನ್ನು ತಾರಕನೆಂಬ ರಾಕ್ಷಸನು ಕೇಳಿ ಜಗದೀಶನಂಕುರಿತು ತಪವಂ ಮಾಡಿ, ಪ್ರಸನ್ನನಾದ ಪರಶಿವನಿಂದ, ದೇವಾಸುರರೊಳಗೆ ಯಾರಿಂದಲೂ ತನಗೆ ಮರಣ ಸಂಭವಿಸದಂತೆಯೂ, ಮರಣವುಂಟಾಗಬೇಕಾದರೆ ಪಾರ್ವತಿಯಲ್ಲಿ ಶಿವನವೀರ್ಯೋತ್ಪನ್ನನಾದ ಏಳುದಿವಸದ ವಯಸ್ಸಿನ ಪುತ್ರನಿಂದ ಆಗಬಹುದೆಂತಲೂ, ವರವಂಪಡೆದುಕೊಂಡು ದೇವತೆಗಳನ್ನು ನಾನಾವಿಧವಾಗಿ ಬಾಧಿಸುತ್ತಿರಲು, ಪಾರ್ವತಿಯಕ್ರೀಡೆಯಲ್ಲಿ ಆಸಕ್ತನಾಗಿದ್ದ ಈಶ್ವರನನ್ನು ಅಭಿಮುಖನನ್ನು ಮಾಡುವದಕ್ಕಾಗಿ ಇಂದ್ರಾದಿಗಳಿಂ ಪ್ರೇರಿತನಾಗಿ ಕಪೋತಪಕ್ಷಿಯ ರೂಪಿನಿಂದ ಶಿವನಮುಂದೆ ಸುಳಿದ ಅಗ್ನಿಯ ಮುಖದಲ್ಲಿ ಶಿವನು ತನ್ನ ವೀರ್ಯವನ್ನು ಬಿಡಲು, ಅದನ್ನು ಸೈರಿಸಲಶಕ್ಯನಾದ ಅಗ್ನಿಯು, ಶರವಣವೆಂಬ ಸ್ಥಳದಲ್ಲಿ ಆ ವೀರ್ಯವನ್ನು ವಿಸರ್ಜಿಸಲು, ಅಲ್ಲಿಯೇಬೆಳೆದು, ಪಾರ್ವತಿಯಿಂದ ನೋಡಲ್ಪಟ್ಟು ಆಕೆಯ ಸ್ತನ್ಯಪಾನವಂಮಾಡಿ, ಹುಟ್ಟಿದ ಏಳನೇ ದಿವಸದಲ್ಲಿ ಸೇನಾಧಿಪತ್ಯವಂ ವಹಿಸಿಕೊಂಡು ತಾರಕಾಸುರನ ಮೇಲೆ ದಂಡೆತ್ತಿಕೊಂಡು ಹೋಗಿ ಅವನಸಂಗಡ ಯುದ್ಧಂಗೈದು, ಅವನನ್ನು ಸೋಲಿಸಿ ತಾಳಲಾರದೆ, ಕ್ರೌಂಚಾದ್ರಿಯಂಹೊಕ್ಕ ಆತಾರಕಾಸುರನನ್ನು ಕೊಂದು, ದೇವತೆಗಳಿಗೆಲ್ಲಾ ಸೌಖ್ಯವಂಕೊಟ್ಟ ಆ ಪ್ರಸಿದ್ಧನಾದ, ಶಿವಕುಮಾರನಾದ ಷಣ್ಮುಖನು ಯಾವಕಾರಣದಿಂದಲೋ ಹುಟ್ಟಿರಬಹುದು ಅದಿಲ್ಲದಿದ್ದರೆ, ಯದಾಯದಾಹಿಶೈವಸ್ಯ ಹಾನಿರ್ಭವತಿಭೂತಲೆ || ತದಾತದಾವತಾರೋಯಂ ಗಣೇಶಸ್ಯಮಹೀತಲೇ || ಎಂಬ ವಚನದಿಂದ ಶೈವಮತರಕ್ಷಣಾರ್ಥವಾಗಿ. ಭೃಂಗೀಶ್ವರ, ಮೊದಲಾದ ಪ್ರಮಥರಮಧ್ಯದಲ್ಲಿ ಯಾವನೋ

ಮಹಾತ್ಮನಾದವನು, ಮಾದಾಂಬೆಯಲ್ಲಿ ಅನುಗ್ರಹವನ್ನಿಟ್ಟು ಪುತ್ರರೂಪಿನಿಂದ ಹುಟ್ಟಿರಬಹುದು.

ಏವಂವಿವಿದಮಾನಾಸು ಕಾಮಿನೀಷುಪರಸ್ಪರಂ |
ಸರ್ವಸೌಭಾಗ್ಯಸಂಪನ್ನಾ ಸುಂದರ್ಯೆಕಾಬ್ರವೀತ್ತದಾ ||
ಕೆನಾಪಿಹೆತುನಾನಂದೀ ಮಾದಾಂಬಾಯಾಸ್ಸುತೊಭವತ್ |
ನೊಚೇದ್ಗರ್ಭಸ್ಥಿತಸ್ಯಾಸ್ಯ ಕಥಂಲಿಂಗಧೃತಿರ್ಭವೆತ್ ||

ಟೀ || ಈ ಪೂರ್ವೋಕ್ತಪ್ರಕಾರವಾಗಿ ಸೂತಿಕಾಗೃಹದಲ್ಲಿ ಕೂಡಿದ್ದಸ್ತ್ರೀಯರು, ಒಬ್ಬರಿಗೊಬ್ಬರು ಮಾತನಾಡಿಕೊಳ್ಳುತ್ತಿರಲು, ಅವರೊಳಗೆ ಸಕಲಸೌಭಾಗ್ಯಗಳಿಂದ ಕೂಡಿದ ಒಬ್ಬ ಸ್ತ್ರೀಯು-ಎಲೌ ಸತಿಯರಾ ಯಾವಕಾರಣದಿಂದಲೋ ನಂದಿಕೇಶ್ವರನೇ ಮಾಧಾಂಬೆಗೆ ಪುತ್ರನಾಗಿ ಹುಟ್ಟಿರುವನು ಹಾಗಲ್ಲದಿದ್ದರೆ, ಗರ್ಭದಲ್ಲಿದ್ದ ಶಿಶುವಿಗೆ ಲಿಂಗಧಾರಣೆಯು ಹ್ಯಾಗಾದೀತು ಎಂದು ಹೇಳಿದಳು.

ಶ್ರುತ್ವೈತದ್ವಿಸ್ಮಿತಾಸ್ಸರ್ವಾ ಜಗ್ಮುಸ್ಸ್ವಸ್ವಗೃಹಂಪ್ರತಿ |
ಮಾದಾಂಬಾಮಾದಿರಾಜಶ್ಚ ದಂಪತೀಹರ್ಷಮಾಪತುಃ ||

ಟೀ || ಈ ಮಾತನ್ನು ಕೇಳಿದ ಸಮಸ್ತ ಸ್ತ್ರೀಯರು ಆಶ್ಚರ್ಯಾವಿಷ್ಟಮಾನಸರಾಗಿ ತಮ್ಮತಮ್ಮ ಮನೆಗಳಂ ಕುರಿತು ಹೊರಟುಹೋದರು. ಅನಂತರದಲ್ಲಿ ಮಾದಾಂಬೆ ಮಾದಿರಾಜ ಎಂಬ ದಂಪತಿಗಳು ಪರಮಸಂತೋಷವನ್ನು ಹೊಂದಿದರು.

ದೀಪಾನರಿಷ್ಟಭವನಾಂತರಭಾಗಸಂಸ್ಥಾನ್ ಭಾಸಾಶಿಶೋರತು
ಲಯಾಹೃತರಶ್ಮಿಪುಂಜಾನ್ | ಮಧ್ಯಾಹ್ನಭಾಜಇವಸಾನಿಶಿನಿಷ್ಪ್ರ
ಭಾಸಾನ್ ದೃಷ್ಟ್ವಾತ್ತಿವಿಸ್ಮಯಮವಾಪಮುದಾಜನಿತ್ರೀ ||

ಟೀ || ಆ ತಾಯಿಯಾದ ಮಾದಾಂಬೆಯು ರಾತ್ರೀಕಾಲದಲ್ಲಿ ಆ ಮಗುವಿನ ಅಸದೃಶವಾದ ದೇಹಕಾಂತಿಯಿಂದ ಹೊಡೆಯಲ್ಪಟ್ಟ ಕಿರಿಣರಾಶಿಯುಳ್ಳವುಗಳಾದ ಕಾರಣ, ಮಧ್ಯಾಹ್ನಕಾಲದಲ್ಲಿರುವಂತೆ ಕಾಂತಿಹೀನಗಳಾಗಿ ಉರಿಯುವ ಸೂತಿಕಾಗೃಹದ ದೀಪಗಳನ್ನು ನೋಡಿ ಸಂತೋಷದಿಂದ ಆಶ್ಚರ್ಯವನ್ನು ಹೊಂದಿದಳು. ಅಂದರೆ—ದೀಪಗಳಿಗೆ ರಾತ್ರಿಯಲ್ಲಿ ಪ್ರಕಾಶಹೆಚ್ಚೆಂಬುವದು ಪ್ರಸಿದ್ಧವೇ ; ಹೀಗಿರುವಲ್ಲಿ ಮಾ

ದಾಂಬೆಯ ಸೂತಿಕಾಗೃಹದಲ್ಲಿ ಹಚ್ಚಿದ್ದ ದೀಪಗಳ ಪ್ರಕಾಶವು ಅಪರಿಮಿತವಾದ ಬಸವೇಶ್ವರನ ತೇಜಸ್ಸಿನಲ್ಲಿ ಅಡಗಿಹೋಗಿ ಸೂರ್ಯನಮುಂದೆ ಹಿಡಿದದೀವಿಗೆಯಂತೆ ಮಂಕಾಗಿದ್ದದ್ದರಿಂದ ಮಾದಾಂಬೆಯು ನೋಡಿ, ಈ ಮಗುವು ಎಂಥಾ ಮಹಾಪುರುಷನೋ ಎಂಬುವ ಅಭಿಪ್ರಾಯದಿಂದ ಆಶ್ಚರ್ಯವನ್ನು ಇಂಥಾ ಮಹಾತ್ಮನು ನನಗೆ ಮಗನಾದನಲ್ಲಾ ಎಂಬ ಅಭಿಪ್ರಾಯದಿಂದ ಸಂತೋಷವನ್ನೂ ಅನುಭವಿಸಿದಳೆಂದು ತಾತ್ಪರ್ಯವು.

ಇತಿ ಬಸವೇಶ್ವರಪ್ರಾದುರ್ಭಾವೋನಾಮ ಚತುರ್ಥಾಧ್ಯಾಯಃ ಸಮಾಪ್ತಃ

---

ಅಥ ಕರ್ಮನಿರಸನಪ್ರತಿಪಾದಕ ಪಂಚಮಾಧ್ಯಾಯ ಪ್ರಾರಂಭಃ.

ಷಡಾನನವಚಶ್ಶ್ರುತ್ವಾ ಭಕ್ತ್ಯಾ ಕುಂಭೋದ್ಭವೋಮುನಿಃ ||
ಪ್ರಣಮ್ಯದಂಡವದ್ಭೂಮೌಷಣ್ಮುಖಂಪುನರಬ್ರವೀತ್ ||

ಟೀ || ಅನಂತರದಲ್ಲಿ ಅಗಸ್ತ್ಯಋಷಿಯು ಷಣ್ಮುಖನಿಂದ ಹೇಳಲ್ಪಟ್ಟ ಮಾತುಗಳನ್ನು ಭಕ್ತಿಯಿಂದ ಕೇಳಿ ಉರಸಾಶಿರಸಾಚೈವ ಮನಸಾಶ್ರದ್ಧಯಾಗಿರಾ || ಪದ್ಭ್ಯಾಂಕರಾಭ್ಯಾಂಕರ್ಣಾಭ್ಯಾಂ ಪ್ರಣಾಮೋಷ್ಟಾಂಗಉಚ್ಯತೆ || ಎಂಬ ವಚನಪ್ರಕಾರ ಭೂಮಿಯಲ್ಲಿ ಸಾಷ್ಟಾಂಗವಾಗಿ ನಮಸ್ಕರಿಸಿ, ತಿರಿಗಿ ಷಣ್ಮುಖನನ್ನು ಕುರಿತು ಹೇಳಿದನು.

ಏವಂನಂದೀಶ್ವರೋಜಾತಸ್ಸುರಮ್ಯೇಹಿಂಗುಳೇಪುರೆ |
ಅಸ್ಯವೃತ್ತಾಂತಮಾಖ್ಯಾಹಿ ಭಗವನ್ಕರುಣಾನಿಧೇ ||

ಟೀ || ಷಡ್ಗುಣೈಶ್ವರ್ಯಸಂಪನ್ನನಾದಂಥ, ದಯಾಸಮುದ್ರನಾದಂಥ ಕುಮಾರಸ್ವಾಮಿಯೇ, ಮನೋಹರವಾದ ಬಾಗವಾಡಿಯಲ್ಲಿ ನಂದೀಶ್ವರನು ಈ ಪ್ರಕಾರ ಅವತರಿಸಿದನಷ್ಟೆ. ಈತನ ವೃತ್ತಾಂತವೇನು? ನಾನು ಕೇಳಲಿಚ್ಛೈಸುತ್ತೇನೆ. ನನ್ನ ಮೇಲಣ ಅನುಗ್ರಹದಿಂದ ನಿರೂಪಿಸಬೇಕೆಂದು ವಿಜ್ಞಾಪಿಸಿಕೊಂಡನು. ಕುಮಾರಸ್ವಾಮಿಯು ಹೇಳುತ್ತಾನೆ.

ಆಹೂಯಭಕ್ತಾನ್ ಲಿಂಗಾಂಕಾನ್ ವೀರಶೈವಾನ್ ಮಹಾಗಣಾನ್ |
ಜಂಗಮಾನೇವತತ್ಕಾಲೇದಂಪತೀತೌವವಂದತುಃ ||

ಟೀ || ಆ ನಂದೀಶ್ವರನು ಹುಟ್ಟಿದ ಕಾಲದಲ್ಲಿ ಜಾಯಾಪತಿಗಳಾದ ಮಾದಾಂಬಾ ಮಾದರಸರು, ಲಿಂಗಧಾರಿಗಳಾದ ವೀರಶೈವ ಮತಸ್ಥರಾದ ಭಕ್ತರನ್ನೂ, ಮಾಹೇಶ್ವರರನ್ನೂ, ಜಂಗಮರನ್ನೂ ಕರೆದು ಅವರಿಗೆ ನಮಸ್ಕರಿಸಿದರು.

ತದಾಸಿಂಹಾಸನಾನ್ಯೇಷಾಂ ದತ್ವಾಪ್ರಕ್ಷಾಳ್ಯತತ್ಪದಂ |
ಭಕ್ತಹಸ್ತಾರ್ಪಿತಂತೇಷಾಂಭೂತಿದಾನಪುರಸ್ಸರಂ ||
ಪಾದೋದಕಂ ಗೃಹೀತ್ವಾತೌ ಗಣಾನಾಮೇವದಂಪತೀ |
ಕ್ಷಾಳಯಿತ್ವಾಶಿಶೋರ್ಗಾತ್ರಂದದೌಭಸ್ಮವಿಲೇಪತುಃ ||

ಟೀ || ಅನಂತರದಲ್ಲಿ ಆ ದಂಪತಿಗಳು ಅವರಿಗೆ ಪ್ರತ್ಯೇಕವಾಗಿ ಉಚಿತವಾದ ಪೀಠಗಳನ್ನು ಕೊಟ್ಟು, ಅವರ ಚರಣಗಳಂ ತೊಳೆದು, ವಿಭೂತಿಪ್ರದಾನಪೂರ್ವಕವಾಗಿ ಭಕ್ತರ ಹಸ್ತದಿಂದ ಕೊಡಲ್ಪಟ್ಟ ಶ್ರೀ ಜಂಗಮಪಾದೋದಕವನ್ನು ತೆಗೆದುಕೊಂಡು ಅದರಿಂದ ಮಗುವಿನ ದೇಹವನ್ನು ತೊಳೆದು, ಭಸ್ಮವನ್ನು ಸರ್ವಾಂಗದಲ್ಲಿಯೂ, ಧಾರಣಂಗೈದರು.

ಭೇರ್ಯಾದಿವಾದ್ಯಘೋಷಶ್ಚ ದಿಗಂತಾನ್ವ್ಯಾನಶಿತದಾ |
ದಿವ್ಯಂಬಸವನಾಮಾಖ್ಯಂ ಚಕ್ರತುಸ್ತೌಗಣಾಜ್ಞಯಾ ||

ಟೀ || ಆ ಕಾಲದಲ್ಲಿ ಭೇರೀಮೃದಂಗಾದಿ ವಾದ್ಯಧ್ವನಿಯು, ದಶದಿಕ್ಕುಗಳನ್ನು ವ್ಯಾಪಿಸುತ್ತಿರಲು, ಮಾಹೇಶ್ವರರ ಅಪ್ಪಣೆಯಿಂದ ಆ ಶಿಶುವಿಗೆ ಮನೋಹರವಾದ ಬಸವೇಶ್ವರನೆಂಬ ನಾಮವನ್ನಿಟ್ಟರು.

ತತೊಮಾಸದ್ವಯೇಜಾತೆ ಬಾಲೋನರ್ಘ್ಯಪ್ರಭಾಯುತಃ |
ಸಂಪ್ರವೃದ್ಧಶರೀರಸ್ಸನ್ ಬಾಲಕ್ರೀಡಾಂಚಕಾರಸಃ ||

ಟೀ || ಅನಂತರದಲ್ಲಿ ಎರಡು ತಿಂಗಳು ಕಳೆಯಲು ಬಹಳ ತೇಜಸ್ವಿಯಾದ ಆ ಬಾಲಕನು ಅಭಿವೃದ್ಧಿಯಂ ಹೊಂದಿದ ದೇಹವುಳ್ಳವನಾಗಿ ಬಾಲಕೇಳಿಯನ್ನು ಮಾಡಿದನು,

ಮುಷ್ಟಿಂಕೃತ್ವಾಕರಯುಗಂಚೋರ್ಧ್ವಂಚಾಧಶ್ಚಚಿಕ್ಷಿಪೇತ್ |
ಓಂಕಾರಸ್ಸರ್ವವೇದಾನಾಮಾದಾವಂತೇಚದೀಯತೆ ||

ತಸ್ಯಮಾತ್ರಾತ್ರಯಂಪ್ರೋಕ್ತಂ ಮುನಿಭಿರ್ಬ್ರಹ್ಮವಾದಿಭಿಃ |
ಅಕಾರಶ್ಚ ತಥೋಕಾರೋ ಮಕಾರೋಥತೃತೀಯಕಃ ||
ಅಕಾರೇಣೋಚ್ಯತೆಬ್ರಹ್ಮಾ ಉಕಾರೇಣೋಚ್ಯತೆಹರಿಃ |
ಮಕಾರೇಣೋಚ್ಯತೆರುದ್ರಸ್ಸರ್ವಕಾರಣಕಾರಣಂ ||
ಸತ್ಯಲೋಕಸ್ತ್ವ ಕಾರೇಣಹ್ಯುಕಾರೇಣಮಹಾಮುನೆ |
ವೈಕುಂಠಲೋಕಃಕಥಿತೊ ದಿವಾಕರಸಮಪ್ರಭಃ ||
ಮಕಾರೇಣತುರುದ್ರಸ್ಯ ಲೋಕಃಕೈಲಾಸಸಂಜ್ಞಕಃ |
ಲೋಕಾನಾಮ ಪಿಸರ್ವೇಷಾಮೂರ್ಧ್ವಂ ಬ್ರಹ್ಮಾಂಡಖರ್ಪರಃ ||
ಖರ್ಪರಸ್ಯೋರ್ಧ್ವಭಾಗೇತು ಕೋಟಿಸೂರ್ಯಸಮಪ್ರಭಃ |
ಅರ್ಧಮಾತ್ರಾತ್ಮಿಕೊಲೋಕಸ್ಸೋಮಲೋಕಇತೀರಿತಃ ||
ಭೋಕ್ತುಂಚಸಕಲಾನ್ಭೋಗಾನ್ ಶಂಕರೊಲೋಕಶಂಕರಃ |
ತತ್ರಾಸ್ತೆ ಬಹುಭಿರ್ದೇವೈರ್ಗಣೈಃಕಲ್ಪಿತವಿಗ್ರಹೈಃ ||
ಅನಯನ್ನಿವತಲ್ಲೋಕಂಕ್ರೀಡಯಾಮಾಸಸೋರ್ಭಕಃ ||

ಟೀ || ಆ ಬಾಲಕನು ಮುಷ್ಟಿಯಿಂಬಲಿದ ಎರಡು ಕೈಗಳನ್ನು ಮೇಲಕ್ಕೂ ಕೆಳಕ್ಕೂ ಹಾರಿಸುತ್ತಾ ಪ್ರಣವವು ಋಗಾದಿ ಸಕಲ ವೇದ ಗಳ ಮೊದಲಲ್ಲಿಯೂ ಕೊನೆಯಲ್ಲಿಯೂ ಸೇರಿಸಲ್ಪಡುತ್ತೆ. ಬ್ರಹ್ಮಜ್ಞಾನಿ ಗಳಾದ ಋಷಿಗಳು ಆ ಪ್ರಣವಕ್ಕೆ ಮಾತ್ರಾತ್ರಯವನ್ನು ಹೇಳಿದ್ದಾರೆ. ಅದು ಯಾವದಂದರೆ ಅಕಾರ, ಉಕಾರ, ಮಕಾರಗಳೇ ! ಅಕಾರದಿಂದ ಬ್ರಹ್ಮನೂ, ಉಕಾರದಿಂದ ವಿಷ್ಣುವೂ, ಮಕಾರದಿಂದ ಎಲ್ಲಾ ಕಾರಣಗ ಳಿಗೂ ಕಾರಣನಾದ ರುದ್ರನೂ, ಹೇಳಲ್ಪಡುತ್ತಾರೆ. ಮತ್ತು ಅಕಾರದಿಂದ ಸತ್ಯಲೋಕವೂ, ಉಕಾರದಿಂದ ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳ ವೈಕುಂಠಲೋಕವೂ, ಮಕಾರದಿಂದ ಕೈಲಾಸವೆಂಬ ಹೆಸರುಳ್ಳ ರುದ್ರ ಲೋಕವೂ ಹೇಳಲ್ಪಟ್ಟವು. ಸಮಸ್ತಲೋಕಗಳ ಮೇಲ್ಗಡೆ ಬ್ರಹ್ಮಾಂ ಡದ ಮುಚ್ಚಳವಿರುವದು. ಅದರ ಮೇಲ್ಗಡೆ ಕೋಟಿಸೂರ್ಯರಿಗೆ ಸದೃಶ ವಾದ ಪ್ರಕಾಶವುಳ್ಳ ಅರ್ಧಮಾತ್ರಾರೂಪವಾದ ಸೋಮಲೋಕವು ಹೇಳಲ್ಪಟ್ಟಿತು. ಸರ್ವರಿಗೂ ಸುಖಂಕರನಾದ ಪರಶಿವನು, ಸಮಸ್ತ ಭೋಗಗಳನ್ನನುಭವಿಸುವದಕ್ಕೋಸ್ಕರ, ಸಕಲ ದೇವತೆಗಳಿಂದಲೂ,

ಕಾಮರೂಪಿಗಳಾದ ಪ್ರಮಥರಿಂದಲೂ, ಕೂಡಿದವನಾಗಿ ಅಲ್ಲಿದ್ದಾನೆ. ಆ ಲೋಕವನ್ನು ತರುವವನ ಹಾಗೆ ಕ್ರೀಡಿಸಿದನು.

ದಧೀಚಿನಾಗೌತಮೇನ ಯೆಶಪ್ತಾ ಬ್ರಾಹ್ಮಣಾಧಮಾಃ |
ನಿಂದಯನ್ನಿವತಾನ್ಸರ್ವಾನ್ಬಾಲೊಲಾಲಾಂವ್ಯಚಿಕ್ಷಿಪತ್ ||

ಟೀ || ದಧೀಚಿಯಿಂದಲೂ, ಗೌತಮನಿಂದಲೂ, ಯಾವ ಬ್ರಾಹ್ಮಣಾಧಮರು ಶಪಿಸಲ್ಪಟ್ಟರೋ ಅವರೆಲ್ಲರನ್ನೂ ದೂಷಿಸುವವನ ಹಾಗೆ ಬಾಲಕನು ಜೊಲ್ಲನ್ನು ಹಾರಿಸಿದನು.

ಯೇಚಕರ್ಮೈಕನಿರತಾಃ ಹಿತ್ವಾಸಾಂಬಂಸದಾಶಿವಂ |
ದೇವಾಂತರೇಷುಯೇಭಕ್ತಾ ಯೆತ್ರಿಪುಂಡ್ರವಿವರ್ಜಿತಾಃ ||
ಲಿಂಗಾನರ್ಪಿತವಸ್ತೂನಾಂಭೊಕ್ತಾರೊಯೆದ್ವಿಜಾಧಮಾಃ |
ಯೆಶಂಭುಪಾದಸಲಿಲಪ್ರಸಾದಾನಾಂಚನಿಂದಕಾಃ ||
ಶಿವಸ್ಯನಿಂದಕಾಯೆತುಶಿವಭಕ್ತೈಕನಿಂದಕಾಃ |
ತೇಷಾಂಜನ್ಮಕಿಮೇತದ್ಧಿ ಜೀವನಂಕಾಕಜೀವನಂ ||
ಏವಂಸಂಚಿಂತ್ಯಬಾಲೊಯಂ ಪ್ರಹಸನ್ನಿವಕುಂಭಜ |
ಪದೆಪದೆಸ್ವಯಂಹಾಸಂ ಚಕಾರಾರ್ಭಕಸತ್ತಮಃ ||

ಟೀ || ಯಾವ ಬ್ರಾಹ್ಮಣಾಧಮರು ಕರ್ಮದಲ್ಲಿ ಮಾತ್ರ ಆಸಕ್ತರಾಗಿ ಪಾರ್ವತೀಸಹಿತನಾದ ಪರಶಿವನನ್ನು ಬಿಟ್ಟು ಬೇರೆ ದೇವರುಗಳಲ್ಲಿ ಭಕ್ತಿಯುಳ್ಳವರಾಗಿದ್ದಾರೋ ಯಾರು ಭಸ್ಮತ್ರಿಪುಂಡ್ರರಹಿತರಾಗಿದ್ದಾರೋ ಯಾರು ರುದ್ರಾಕ್ಷಮಾಲೆಯನ್ನು ತ್ಯಜಿಸಿದ್ದಾರೋ ಯಾರು ಲಿಂಗಧಾರಣೆಯಿಂದ ಬಿಡಲ್ಪಟ್ಟವರಾಗಿ ಲಿಂಗಕ್ಕೆ ಸಮರ್ಪಿಸದೆ ಪದಾರ್ಥಗಳನ್ನು ಭುಂಜಿಸುತ್ತಾರೋ ಯಾರು ಪರಮೇಶ್ವರನ ಪಾದೋದಕ ಪ್ರಸಾದಗಳನ್ನು ದೂಷಿಸುತ್ತಾರೋ ಯಾರು ಶಿವನನ್ನೂ ಶಿವಭಕ್ತರನ್ನೂ ನಿಂದಿಸುತ್ತಾರೋ ಅವರ ಜನ್ಮವು ಯಾತಕ್ಕೆ ? ಅಂಥಾವರ ಬದುಕುವಿಕೆಯು ಕಾಗೆಯ ಬದುಕುವಿಕೆಯ ಹಾಗಿದೆ. ಈರೀತಿಯಾಗಿ ಈ ಬಾಲಕನು ಯೋಚಿಸಿ ಹಾಸ್ಯಮಾಡುತ್ತಾನೋ ಎಂಬಂತೆ ಆ ಬಾಲಕನು ಬಾರಿಬಾರಿಗೂ ತಾನೇ ನಗುತ್ತಿದ್ದನು.

ಸಮುಯೆಸ್ತನ್ಯಪಾನಸ್ಯ ತೂಷ್ಣೀಂಭಾವೇನಸಂಸ್ಥಿತಃ |
ಶಿವಪ್ರಸಾದಲೀಲಾಯಾಂ ಮಗ್ನಸ್ಸನ್ನಿವಭಾಸತೆ ||

ಟೀ || ಸ್ತನ್ಯಪಾನವಂಮಾಡುವ ಕಾಲದಲ್ಲಿ ಮೌನವನ್ನು ವಹಿಸಿಕೊಂಡಿರುವ ಆ ಬಾಲಕನು ಶಿವಪ್ರಸಾದ ಸೇವೆಯಲ್ಲಿ ಮಗ್ನನಾಗಿದ್ದಾನೋ ಎಂಬ ಹಾಗೆ ಕಾಣಿಸಿಕೊಂಡನು.

ಶಿವಾನಂದರಸಂಸಾಕ್ಷಾತ್ಕೃತ್ವಾಕರಗತಂಶಿಶುಃ |
ಚಿಕ್ಷೇಪವದನೆಸ್ವೀಯೆರುಚ್ಯಾಸಕ್ತ್ಯಾಕರದ್ವಯಂ ||

ಟೀ || ಶಿಶುರೂಪನಾದ ಬಸವ್ವೇಶ್ವರನು ಪ್ರತ್ಯಕ್ಷವಾದ ಶಿವಾನಂದರಸವನ್ನು ಹಸ್ತಗತವನ್ನಾಗಿ ಮಾಡಿಕೊಂಡು ಆ ಕರಗತಾನಂದರಸಾಸ್ವಾದನದಲ್ಲಿ ಆಸಕ್ತಿಯಿಂದಲೋ ಎಂಬ ಹಾಗೆ ಎರಡು ಕೈಗಳನ್ನು ತನ್ನ ಬಾಯಲ್ಲಿ ಮಡಗಿಕೊಂಡನು.

ಬಾಲಶ್ಶಿವಪದಾಂಭೋಜಧ್ಯಾನನಿಷ್ಠೊ ವಿಚೇಷ್ಟಿತಃ |
ಮದಾಗಮನಕಾರ್ಯಸ್ಯಚಿರಕಾಲೊಗತೋಧುನಾ ||

ಟೀ || ಬಾಲಕನಾದ ಬಸವೇಶ್ವರನು ಈಶ್ವರಚರಣಕಮಲಧ್ಯಾನದಲ್ಲಿ ಸ್ಥಿರಚಿತ್ತನಾದಾಗ ಬಾಹ್ಯವ್ಯಾಪಾರಶೂನ್ಯನಾಗಿದ್ದು ತಾನು ಉದ್ದೇಶಿಸಿಕೊಂಡುಬಂದ ಕಾರ್ಯಕ್ಕೆ ಬಹಳಕಾಲವಾಯಿತು ಎಂಬ ಯೋಚನೆಯಿಂದಲೋ ಎಂಬ ಹಾಗೆ ಪದೇಪದೇ ಬೆಚ್ಚಿದನು.

ಗಾನಶ್ರವಣಮಾತ್ರೇಣ ಶಿವಸ್ಯಪರಮಾತ್ಮನಃ |
ಛದ್ಮನಾರೋದನಸ್ಯಾಸ್ಯಾ ನಂದಾಶ್ರೂಣಿವಿನಿರ್ಯಯುಃ ||

ಟೀ || ಪರಮಾತ್ಮಸ್ವರೂಪನಾದ ಪರಶಿವನ ವಿಷಯವಾದ ಹಾಡನ್ನು ಕೇಳಿದಮಾತ್ರದಿಂದ ಅಳುವಿಕೆಯೆಂಬ ನೆವದಿಂದ ಬಸವೇಶ್ವರನಿಗೆ ಆನಂದಬಾಷ್ಪಗಳು ಸುರಿದವು.

ಭವಬಾಧಾಸಮಾಕ್ರಾಂತ ದುಃಖೈಕಾಕ್ರಾಂತಚೆತಸಾಂ |
ವಿರರಾಜನುಹಾತೇಜಾ ದುಃಖಮಾಕುಲಯನ್ನಿವ ||

ಟೀ || ಜನನಮರಣಾತ್ಮಕವಾದ ಸಂಸಾರದ ಉಪದ್ರವದಿಂದ ಆಕ್ರಮಿಸಲ್ಪಟ್ಟವರಾಗಿಯೂ, ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕವೆಂಬ ತಾಪತ್ರಯದಿಂದ ಹಿಡಿಯಲ್ಪಟ್ಟವರಾಗಿಯೂ, ಇರುವವರ

ದುಃಖಾಂಧಕಾರವನ್ನು ಪರಿಹರಿಸುತ್ತಾನೋ ಎಂಬಹಾಗೆ ಮಹಾತೇಜಸ್ವಿಯಾದ ಬಸವೇಶ್ವರನು ಸೂರ್ಯನಂತೆ ಪ್ರಕಾಶಿಸಿದನು.

ಉದ್ವರ್ತನಕ್ರಿಯಾಂಚಕ್ರೆ ಭೂಮಾವಸೋರ್ಭಕಸತ್ತಮಃ |
ಮಹೇಶ್ವರಪದದ್ವಂದ್ವೆ ನತಿಂಕರ್ತುಮಿವಾದರಾತ್ ||

ಟೀ || ಆ ಶ್ರೇಷ್ಠನಾದ ಬಾಲಕನು ಪರಮೇಶ್ವರನ ಪಾದಯುಗ್ಮಕ್ಕೆ ಪ್ರೀತಿಯದೆಸೆಯಿಂದ ನಮಸ್ಕಾರವನ್ನು ಮಾಡುವದಕ್ಕೋಸ್ಕರವೋ ಎಂಬಂತೆ ನೆಲದಲ್ಲಿ ಹೊರಳಿದನು.

ಶಿವಭಕ್ತಿಂವ್ಯತೀತಾಂಸ ತೂತ್ಥಾಪಯತಿಸರ್ವಥಾ |
ಇತೀವಬಸವೇಶೋಯಂ ಚಕಾರೋನ್ನಮಿತಂಶಿರಃ ||

ಟೀ || ಬಿದ್ದುಹೋಗಿರುವ ಶಿವಭಕ್ತಿಯನ್ನು ಸರ್ವಪ್ರಯತ್ನದಿಂದಲೂ ಮೇಲಕ್ಕೆ ಎತ್ತುತ್ತಾನೋ ಎಂಬಂತೆ ಬಸವೇಶ್ವರನು ತನ್ನ ತಲೆಯನ್ನು ಮೇಲಕ್ಕೆ ಎತ್ತಿದನು.

ಏತಾಂಪದ್ಮಾಸನಾಸೀನ ವೃತ್ತಿಂಸರ್ವೋತ್ತಮೋತ್ತಮಾಂ |
ಅಭ್ಯಸನ್ನಿವಯೋಗಾನಾಂ ಸಾಧನಾರ್ಥಂಪ್ರಮೋದತಃ |
ಬಸವೇಶಸ್ತುಬಾಲೋಯಂ ನ್ಯಸೀದತ್ಪೃಥಿವೀತಲೆ ||

ಟೀ || ಯೋಗಗಳನ್ನು ಸಾಧಿಸುವದಕ್ಕೋಸ್ಕರ ಎಂಭತ್ತುನಾಲ್ಕಾಸನಗಳಲ್ಲಿಯೂ, ಮುಖ್ಯವಾದ ಪದ್ಮಾಸನದಲ್ಲಿ ಕುಳಿತುಕೊಳ್ಳುವ ವ್ಯಾಪಾರವನ್ನು ಕಲಿಯುತ್ತಾನೋ ಎಂಬಹಾಗೆ ಬಾಲಕನಾದ ಬಸವೇಶ್ವರನು ಸಂತೋಷದಿಂದ ನೆಲದ ಮೇಲೆ ಕುಳಿತುಕೊಂಡನು.

ದ್ವಿತೀಯಶಂಭುರ್ನಂದೀಶಸ್ತ್ವಹಮೇವನಚಾಪರಃ |
ಇತೀವಗಮನಂಚಕ್ರೆಜಾನುಹಸ್ತೈಶ್ಶನೈಶ್ಶನೈಃ ||

ಟೀ || ಎರಡನೇ ಶಿವನಾದ ನಂದೀಶ್ವರನು ನಾನೇ ಹೊರ್ತು ಮತ್ತೊಬ್ಬನಿಲ್ಲ. ಹೀಗೆಂಬ ಅಭಿಪ್ರಾಯದಿಂದಲೋ ಎಂಬಹಾಗೆ ಮಂಡಿಗಳಿಂದಲೂ, ಕೈಗಳಿಂದಲೂ, ಮೆಲ್ಲಮೆಲ್ಲನೆ ಗಮನವನ್ನು ಮಾಡಿದನು. (ಅಂಬೆಗಾಲಿಕ್ಕಿದನೆಂಬರ್ಥ)

ವೀರಾನಾಹೇಶ್ವರಾಚಾರೊ ರಾಶೀಭೂತಇವೋತ್ಸುಕಃ |
ಬಸವೇಶೋಮಹಾತೇಜಾ ರಸಾಯಾಮುತ್ಥಿತಸ್ಥಿತಃ ||

ಟೀ || ವೀರಶೈವಾಚಾರವು ರಾಶಿಯಾಯಿತೋ ಎಂಬಂತೆ ಔತ್ಸುಕ್ಯವಿಶಿಷ್ಟನಾಗಿಯೂ ತೇಜಸ್ವಿಯಾಗಿಯೂ ಇರುವ ಬಸವೇಶ್ವರನು ಭೂಮಿಯಲ್ಲಿ ಎದ್ದು ನಿಂತುಕೊಂಡನು.

ಪೂರ್ವಮಾರ್ಗಾನುಸಾರೇಣ ಗಮನಂಕ್ರಿಯತೆಮಯಾ |
ಚಕಾರಸೋರ್ಭಕಶ್ಶ್ರೀಮಾರ್ಕ್ಷಪಾದಕ್ಷೆಪಮಿತಸ್ತತಃ ||

ಟೀ || ನಾನು ಪೂರ್ವಾಚಾರ್ಯರ ಮಾರ್ಗವನ್ನನುಸರಿಸಿ ನಡೆಯುತ್ತೇನೆಂದು ತೋರಿಸುತ್ತಾನೋ ಎಂಬಂತೆ ಸಂಪದ್ಯುಕ್ತನಾದ ಆ ಬಾಲಕನು ಇತ್ತಲೂ ಅತ್ತಲೂ ಪಾದನ್ಯಾಸವನ್ನು ಮಾಡಿದನು. (ತಪ್ಪೆಜ್ಜೆಯನ್ನಿಟ್ಟನೆಂದರ್ಥ)

ಶಿವಸ್ಮರಣಮಾತ್ರೇಣ ಸ್ಖಲದ್ವಾಕ್ಯಪರಂಪರಾಂ |
ಜ್ಞಾಪಯನ್ನಿವಲೋಕಾನಾಂಮಂದಂಮಂದಮುವಾಚಸಃ ||

ಟೀ || ಈಶ್ವರಸ್ಮರಣ ಮಾತ್ರದಿಂದ ಜಾರಿಹೋಗುತ್ತಿರುವ ತನ್ನ ಮಾತುಗಳ ಪಙ್ತ್ತಿಯನ್ನು ಜನಗಳಿಗೆ ತಿಳಿಸುವನೋ ಎಂಬಂತೆ ಆ ಬಸವೇಶ್ವರನು ಮೆಲ್ಲಮೆಲ್ಲನೆ ಮಾತನಾಡಿದನು. (ತೊದಳ್ಮಾತಾಡಿದನೆಂದರ್ಥ)

ಜನಾಶ್ಶ್ರೇಷ್ಠತಮಾಲೋಕೆಶಿವಭಕ್ತಿಪರಾಯಣಾಃ |
ಇತಿ ಕೋಲಾಹಲಂಕುರ್ವಂಶ್ಚಕಾರೋಲ್ಲಲಯಾಮಿವ ||

ಟೀ || ಲೋಕದೋಳ್ ಶಿವಭಕ್ತಿಯಲ್ಲಿ ನಿಷ್ಠೆಯುಳ್ಳ ಜನರೇ ಅತ್ಯಂತ ಶ್ರೇಷ್ಠರೆಂದು ಕೋಲಾಹಲವನ್ನು ಮಾಡುತ್ತಾನೋ ಎಂಬ ಹಾಗೆ ಒಂದೊಂದು ಸಮಯದಲ್ಲಿ ಲೀಲೆಯಿಂದ ಕೂಗಿದನು.

ಕ್ರೀಡಾಸಮಯಏವಾಯಂಚಕಾರಶಿವಪೂಜನಂ |
ಪಿತಾಪಿ ಮಾದಿರಾಜೋಯಂ ದೃಷ್ಟ್ವಾತಂಮುದಿತೋಭವತ್ ||

ಟೀ || ಈ ಬಸವೇಶ್ವರನು ಬಾಲ್ಯಕ್ಕೆ ತಕ್ಕ ಆಟವನ್ನಾಡುವ ಕಾಲದಲ್ಲಿಯೇ ಶಿವಾರ್ಚನೆಯನ್ನು ಮಾಡಿದನು. ತಂದೆಯಾದ ಮಾದಿರಾಜನೂ ಕೂಡ ಪುತ್ರನನ್ನು ನೋಡಿ ಸಂತುಷ್ಟನಾದನು.

ತತಃಕ್ರಮೇಣಯಾತೇಷುವತ್ಸರೇಷುಶಿಶೋಸ್ತದಾ |
ಸಂಪ್ರಾಪ್ತೆಪಂಚಮೆವರ್ಷೆ ಬಸವೇಶಸ್ಯಧೀಮತೇಃ |
ಅಕ್ಷರಾಭ್ಯಸನಂತಾತಃ ಕಾರಯಾಮಾಸ ಸಾದರಂ ||

ಟೀ || ಅನಂತರದಲ್ಲಿ ಆಗ ಆ ಬಾಲಕನಾದ ಬಸವೇಶ್ವರನಿಗೆ ಕ್ರಮವಾಗಿ ಕೆಲವು ವರ್ಷಗಳು ಕಳೆಯುತ್ತಿರಲಾಗಿ ಐದನೇವರ್ಷಪ್ರಾಪ್ತ ವಾಗಲು ಮಾದಿರಾಜನು ಅಕ್ಷರಾಭ್ಯಾಸವನ್ನು ಮಾಡಿಸಿದನು.

ಸಂಪ್ರಾಪ್ತೆತ್ವಾಷ್ಟಮೇವರ್ಷೇ ಮಾದಿರಾಜಸ್ಸುಧೀಮಣಿಃ |
ಪುತ್ರೋಪನಯನೋದ್ಯುಕ್ತೋ ಹಿಂಗುಳೀಪುರವಾಸಿನಃ |
ದೇಶಾಂತರಾಗತಾನನ್ಯಾನ್ ಸಮೀಪಗ್ರಾಮವಾಸಿನಃ |
ಆಹೂಯಬ್ರಾಹ್ಮಣಾಂತ್ಸರ್ವಾನ್ವೇದಶಾಸ್ತ್ರಾರ್ಥಪಾರಗಾನ್ |
ತೈಸ್ಸಾಕಂತುಸಭಾಮಧ್ಯೆ ಪ್ರೋವಾಚ ಮಧುರಂವಚಃ ||

ಟೀ || ಎಂಟನೇವರ್ಷಬರಲು ಪಂಡಿತಪ್ರಮುಖನಾದ ಮಾದಿರಾಜೈಯ್ಯನು ಮಗನಾದ ಬಸವೇಶ್ವರನಿಗೆ ಉಪನಯನಂಗೈಯ್ಯಲುದ್ಯುಕ್ತನಾಗಿ ಹಿಂಗುಳೀಪಟ್ಟಣದಲ್ಲಿ ವಾಸಿಸುವ, ಮತ್ತು ಬೇರೆದೇಶಗಳಿಂದ ಬಂದಿರುವ, ಸಮೀಪಗ್ರಾಮಗಳಲ್ಲಿ ವಾಸಿಸುತ್ತಲಿರುವ ಸಕಲಶ್ರುತಿಶಾಸ್ತ್ರಾರ್ಥಗಳಲ್ಲಿ ವಿಚಕ್ಷಣರಾದ ಎಲ್ಲಾ ಬ್ರಾಹ್ಮಣರನ್ನೂ ಕರಿಸಿ ಸಭಾಮಧ್ಯದಲ್ಲಿ ಅವರಸಂಗಡ ಮಧುರವಾಗಿ ಮಾತನಾಡಿದನು. (ಅದೇನಂದರೆ)

ಪುತ್ರೋಮಮಾಷ್ಟವರ್ಷೋಽಯಂ ಬಸವೇಶೋಮಹಾಮತಿಃ |
ಅತಸ್ತಸ್ಯೋಪನಯನಂ ಕಾರ್ಯಮದ್ಯದ್ವಿಜರ್ಷಭಾಃ |
ವಿಮರ್ಶನೀಯಮಧುನಾಲಗ್ನಂಸಲ್ಲಕ್ಷಣಾನ್ವಿತಂ ||

ಟೀ || ಮಹಾಬುದ್ಧಿಸಂಪನ್ನನಾದಂಥ, ನನ್ನ ಮಗನಾದ ಬಸವೇಶನು ಎಂಟುವರ್ಷದವನಾಗಿದ್ದಾನೆ. ಆದಕಾರಣ ಇವನಿಗೆ ಉಪನಯವನ್ನು ಮಾಡಬೇಕು. ಎಲೈ ಬ್ರಾಹ್ಮಣವರ್ಯರೇ ನೀವು ಈಗ ಆ ಕರ್ಮಯೋಗ್ಯವಾಗಿಯೂ, ಶುಭಲಕ್ಷಣಯುಕ್ತವಾಗಿಯೂ, ಇರುವ ಒಂದು ಲಗ್ನವನ್ನು ಯೋಚಿಸಿರಿ.

ಇತ್ಯೇವಂಮಾದಿರಾಜಸ್ಯವಚಶ್ಶ್ರುತ್ವಾಸಗೌರವಂ |
ವಿಚಾರವತ್ಸುಸರ್ವೇಷುಬ್ರಾಹ್ಮಣೇಷುಯದೃಚ್ಛಯಾ |
ಆಜಗಾಮಮಹಾಶೀಲಃ ಪೃಥುಕೋಬಸವೇಶ್ವರಃ ||

ಟೀ|| ಈ ಪ್ರಕಾರವಾದ ಮಾದಿರಾಜನ ಗೌರವದೊಡನೆ ಕೂಡಿದ ಮಾತನ್ನು ಕೇಳಿ ಸಮಸ್ತ ಬ್ರಾಹ್ಮಣರೂ ತಮ್ಮ ತಮೊಳಗೆ ಉಪನಯನ ಲಗ್ನವನ್ನು ವಿಚಾರಿಸುತ್ತಲಿರಲಾಗಿ ಬಹಳ ಸಚ್ಚರಿತ್ರನಾದ ಬಾಲಕನಾದ ಬಸವೇಶ್ವರನು ಅಲ್ಲಿಗೆ ಬಂದನು.

ಆಗತ್ಯಪ್ರಾವಿಶತ್ತೂರ್ಣಂ ಮಾದಿರಾಜಾಂತಿಕೇಸ್ವಯಂ |
ಆಶೇಷವಿಪ್ರವಾಕ್ಯಾನಿ ಶ್ರುತ್ವಾಪ್ರಾಹಾತಿಧೃಷ್ಟವತ್ ||
ಭೋಭೋಪಿತಸ್ತದಾಖ್ಯಾಹಿ ಯದೇತ್ಯೈಸ್ತುವಿಚಿಂತ್ಯತೆ |
ಏವಮುಕ್ತಸ್ತುಬಾಲೇನ ಪಿತಾವಚನಮಬ್ರವೀತ್ ||

ಟೀ || ಮಹಾತ್ಮನಾದ ಬಸವೇಶ್ವರನು ತಾನು ಶೀಘ್ರವಾಗಿ ಮಾದಿರಾಜನ ಸಮಿಾಪಕ್ಕೆ ಬಂದು. ಅಲ್ಲಿ ಕೂಡಿದ್ದ ಬ್ರಾಹ್ಮಣರು ಆಡುತ್ತಿದ್ದ ಮಾತುಗಳನ್ನೆಲ್ಲಾ ಕೇಳಿ ಬಹಳ ಧೈರ್ಯದಿಂದ ಪ್ರೌಢನಂತೆ ಹೇಳಿದನು. ಏನಂದರೆ ಎಲೈ ತಂದೆಯೇ ಈ ವಿಪ್ರರೊಡನೆ ಯಾವ ಸಂಗತಿಯನ್ನು ಕುರಿತು ಯೋಚಿಸುತ್ತೀಯೋ ಅದನ್ನು ನನಿಗೆ ಹೇಳು ಈ ಪ್ರಕಾರವಾಗಿ ಬಸವಕುಮಾರನಿಂದ ಕೇಳಲ್ಪಟ್ಟ ಮಾದಿರಾಜನು ಮುಂದು ಹೇಳುವ ಪ್ರಕಾರವಾಗಿ ಉತ್ತರವನ್ನು ಹೇಳಿದನು.

ತವೋಪನಯನಂಕರ್ತುಂ ಯತಿಷ್ಯೆಬಸವೇಶ್ವರ |
ಏವಮುಕ್ತಸ್ತುಬಾಲೋಯಂ ಪಿತರಂಪ್ರತ್ಯಭಾಷತ ||

ಟೀ || ಎಲೈ ಬಸವೇಶ್ವರನೇ ನಿನಗೆ ಉಪನಯನವನ್ನು ಮಾಡುವದಕ್ಕೋಸ್ಕರ ಪ್ರಯತ್ನಿಸಿದ್ದೇನೆನಲು, ಬಾಲಕನಾದ ಬಸವೇಶ್ವರನು ಕೇಳಿ, ತಂದೆಯನ್ನು ಕುರಿತು ಹೇಳಿದನು.

ಕರ್ಮೋಪನಯನಂಕರ್ತುಂ ತಾತ ನಾಂಗೀಕರೋಮ್ಯಹಂ |
ನೂನಂಶಿವಸ್ವರೂಪೋಹಂ ನಜೀವಃಕರ್ಮಪೂರಿತಃ ||

ಎಲೈ ತಂದೆಯೇ ನಾನು, ಉಪನಯನ ಕರ್ಮವನ್ನು ಮಾಡುವದಕ್ಕೋಸ್ಕರ ಒಪ್ಪಿಕೊಳ್ಳುವದಿಲ್ಲ. ನಾನು ಶಿವರೂಪನೇ ಆಗಿದ್ದೇನೆ. ಕರ್ಮಭರಿತನಾದ ಜೀವನಾಗಿಲ್ಲ. ಇದುಸತ್ಯ.

ನಾವಯೋಃರಂತರಂಕಿಂಚಿದ್ವಿದ್ಯತೆಪರಮಾರ್ಥತಃ |
ಮಹಾಬ್ರಾಹ್ಮಣಮಿಾಶಾನಂ ಪ್ರವದಂತಿ ಮುನೀಶ್ವರಾಃ ||

ಟೀ || ತತ್ವವನ್ನು ವಿಚಾರಿಸಿದರೆ, ಶಿವನಿಗೂ, ನನಿಗೂ, ಸ್ವಲ್ಪ ವಾದರೂ ಭೇದವಿರುವದಿಲ್ಲ, ಋಷಿಶ್ರೇಷ್ಠರಾದವರು ಈಶ್ವರನನ್ನು ಬ್ರಾಹ್ಮಣೋತ್ತಮನೆಂದು ಹೇಳುತ್ತಾರೆ.

ಸಾಮವೇದಸ್ಥಿತೋಮಂತ್ರಃ ಪ್ರಪದಾಖ್ಯೋಮಹತ್ತರಃ |
ಶಿವಂಕರಂಶಿವಂಸಾಂಬ ಮುಪಕ್ರಮ್ಯೈದಮಬ್ರವೀತ್ ||

ಟೀ || ಸಾಮವೇದದಲ್ಲಿರುವ ಪ್ರಪದವೆಂಬ ಅತ್ಯುತ್ಕೃಷ್ಟವಾದ ಮಂತ್ರವು, ಭಕ್ತರಿಗೆ ಮಂಗಳಪ್ರದ ನಾದಂಥ ಪಾರ್ವತೀಸಮೇತನಾ ದಂಥ ಶಂಕರನನ್ನು ಉದ್ದೇಶಿಸಿ ಈ ವಕ್ಷ್ಯಮಾಣ ವಚನವನ್ನು ಹೇಳಿತು.

ದೇವೇಷುಬ್ರಾಹ್ಮಣೋಸಿತ್ವಂ ಮನುಷ್ಯೇಷ್ವಹಮೀಂತಃ |
ಬ್ರಾಹ್ಮಣೋಬ್ರಾಹ್ಮಣಂಪುಣ್ಯ ಮುಪಧಾವೆನ್ನಚೆತರಂ ||

ಟೀ || ನೀನು, ವಿಷ್ಣು ಬ್ರಹ್ಮಾದಿ ದೇವತೆಗಳೊಳಗೆ ಬ್ರಾಹ್ಮಣ ನಾಗಿದ್ದೀಯೆ, ನಾನು ಮನುಷ್ಯರಲ್ಲಿ ಬ್ರಾಹ್ಮಣನೆನಿಸಿಕೊಳ್ಳಲ್ಪಟ್ಟಿದ್ದೇನೆ. ಬ್ರಾಹ್ಮಣನು ಪರಿಶುದ್ಧನಾದ ಬ್ರಾಹ್ಮಣನನ್ನೇ ಅನುಸರಿಸಬೇಕಲ್ಲದೆ ಮತ್ತೊಬ್ಬನನ್ನು ಅನುಸರಿಸಕೂಡದು.

ಅತಸ್ತ್ವಮುಪಧಾವಾಮಿ ನಾನ್ಯದಿಚ್ಛಾಮಿದೈವತಂ |
ಅತೋಬ್ರಾಹ್ಮಣ್ಯಮೀಶಸ್ಯ ಸ್ವತಸ್ಸಿದ್ಧಂನಕರ್ಮಜಂ ||

ಟೀ || ಆದಕಾರಣ ಮಹಾಬ್ರಾಹ್ಮಣನಾದ ಆ ಪರಶಿವನನ್ನು ಆಶ್ರೈಸುತ್ತೇನೆ, ಮತ್ತೊಬ್ಬ ದೇವರನ್ನು ಅಪೇಕ್ಷಿಸುವದಿಲ್ಲ. ಆದ್ದರಿಂದ ಶಿವನಿಗೆ ಬ್ರಾಹ್ಮಣ್ಯವು ಸಹಜಸಿದ್ಧವಾದದ್ದೇ ಹೊರ್ತು ಸಾಧಾರಣರಿಗೆ ಬಂದಂತೆ ಕರ್ಮದಿಂದ ಬಂದಿಲ್ಲ.

ಕಿಮಾತ್ಮನಶ್ಶುದ್ಧಿಕರಂ ಕಿಂವಾದೇಹಸ್ಯಶುದ್ಧಿದಂ |
ಆತ್ಮನಶ್ಛೇದಸಂಗಸ್ಯ ಶುದ್ಧಿಸ್ಸ್ವಾಭಾವಿಕೀಮತಾ ||

ಟೀ || ಈ ಉಪನಯನವು ಆತ್ಮನಿಗೆ ಪಾರಿಶುದ್ಧ್ಯವನ್ನು ಕೊಡು ವುದೊ ? ಶರೀರಕ್ಕೆ ಪಾರಿಶುದ್ಧ್ಯವನ್ನು ಕೊಡುವುದೊ ? ಆತ್ಮಕ್ಕೆ ಶುದ್ಧಿಯನ್ನು ಕೊಡುವುದು ಅಂದರೆ ಕಮಲಪತ್ರಗತ ಜಲದಂತೆ ಜಗತ್ತಿ ನಲ್ಲಿ ಅಂಟಿಯೂ, ಅಂಟದಂತಿರುವ ಪರಮಾತ್ಮನಿಗೆ ಶುದ್ಧಿಯುಂಟುವದು

ಸ್ವಭಾವಸಿದ್ಧವಾದುದರಿಂದ ಉಪನಯನವು ಆತ್ಮನನ್ನು ಪರಿಶುದ್ಧಗೊಳಿಸ ಲಾರದು.

ದೇಹಸ್ಯದೋಷಯುಕ್ತಸ್ಯ ಕಥಂಶುದ್ಧಿಃಪ್ರಜಾಯತೆ |
ತತ್ರಾಪಿಪಂಚಕೋಶೇಷು ಕಸ್ಯಕೋಶಸ್ಯಶುದ್ಧಿದಂ ||
ಪಂಚಕೋಶಾಂತ್ಸಮುತ್ಸಾರ್ಯ ಧ್ಯಾಯಿಾತಶಾನಮವ್ಯಯಂ |
ಏವಂಯೊಧ್ಯಾಯತೆಸಾಂಬಂ ಬ್ರಹ್ಮೈಕಂಸರ್ವಕಾರಣಂ ||
ಅತೀತಃಪಂಚಕೋಶೇಭ್ಯ ಶ್ಶಿವಇತ್ಯುಚ್ಯತೆಬುಧೈಃ |
ಅತ್ರೇತಿಹಾಸಂವಕ್ಷ್ಯಾಮಿಪುರಾಣಂ ಪಾಪನಾಶನಂ ||

ಟೀ || ದೋಷಭರಿತವಾದಂಥ, ಶರೀರಕ್ಕೆ ಉಪನಯನದಿಂದ ಹ್ಯಾಗೆತಾನೇ ಶುದ್ಧಿಯುಂಟಾದೀತು ? ಮತ್ತು ಈ ಉಪನಯನವು ಅನ್ನ, ಪ್ರಾಣ, ಮನೊ ವಿಜ್ಞಾನ, ಆನಂದವೆಂಬ ಪಂಚಕೋಶಗಳಲ್ಲಿ ಯಾವ ಕೋಶಕ್ಕೆ ಶುದ್ಧಿಯನ್ನು ಕೊಡುತ್ತದೆ ? ಪೂರ್ವೋತ್ತರವಾದ ಪಂಚಕೋಶ ಗಳನ್ನು ದಾಟಿ, ನಾಶರಹಿತನಾದಂಥ, ಪರಶಿವನನ್ನು ಧ್ಯಾನಿಸಬೇಕು. ಈ ಪ್ರಕಾರವಾಗಿ ಯಾವನು ಪಾರ್ವತೀಸಹಿತನಾದ, ಸಕಲ ಪ್ರಪಂಚ ಕ್ಕೂ ನಿಮಿತ್ತಭೂತನಾದ ಸ್ವಗತ, ಸಜಾತೀಯ ವಿಜಾತೀಯ ಭೇದಶೂನ್ಯನಾದ, ಸರ್ವಜ್ಞತ್ವಾದಿ ಷಡ್ಧರ್ಮಗಳಿಂದೊಡಗೂಡಿದ ಸಚ್ಚಿ ದಾನಂದಾತ್ಮಕನಾದ ಬ್ರಹ್ಮಶಬ್ದವಾಚ್ಯನಾದ ಈಶ್ವರನನ್ನು ಧ್ಯಾನಿಸು ತ್ತಾನೋ ಅವನನ್ನು ಪಂಚಕೋಶಗಳನ್ನು ಮಿಾರಿದ ಶಿವನೆಂದು ವಿದ್ವಾಂ ಸರು ಹೇಳುತ್ತಾರೆ. ಈ ವಿಷಯದಲ್ಲಿ ಪಾಪಪರಿಹಾರಕವಾದಂಥ ಪುರಾ ತನವಾದಂಥ, ಒಂದು ಕಥೆಯನ್ನು ಹೇಳುತ್ತೇನೆ.

ಕಾಶೀಕ್ಷೇತ್ರೋತ್ತರಭಾಗೆ ತಸ್ಮಿನ್ಪುಣ್ಯಂಮಹತ್ತರಂ |
ಬದರೀವನಮತ ಘಂ ಮುನಿಭಿಃಪರಿಸೇವಿತಂ ||

ಟೀ || ಪ್ರಸಿದ್ಧವಾದ ಕಾಶೀಕ್ಷೇತ್ರದ ಉತ್ತರಭಾಗದಲ್ಲಿ ಪರಿಶು ದ್ಧವಾದದ್ದಾಗಿಯೂ ಅತ್ಯುತ್ಕೃಷ್ಟವಾದದ್ದಾಗಿಯೂ, ಋಷಿಗಳಿಂದ ಸೇವಿಸಲ್ಪಟ್ಟದ್ದಾಗಿಯೂ, ಇರುವ, ಬದರಿಕಾವನವೊಂದುಂಟು.

ತತ್ರೈಕೋಭೂನ್ಮುನಿವರೋ ವರುಣೋನಾಮತಾಪಸಃ |
ತಸ್ಯಾಸೀತ ನಯಃಕಶ್ಚಿತ್ ಸಿದ್ಧ ಸ ಪಸಾಂನಿಧಿಃ ||

ಭೃಗುರ್ನಾಮಮಹಾಯೋಗೀ ನಿತ್ಯಂಸತ್ಯಪರಾಯಣಃ ।
ಸಕದಾಚಿತ್ಸಮಾಗತ್ಯ ವರುಣಸ್ಯಾಂತಿಕಂಸ್ವಯಂ ॥
ಕೃತ್ವಾಪ್ರದಕ್ಷಿಣಂಪೂರ್ವಂಪ್ರಣನಾಮಾಥದಂಡವತ್ ।
ಉವಾಚವಚನಂಸಮ್ಯಗ್ಗಂಭೀರಂಪರಮಾರ್ಥದಂ ॥

ಟೀ ॥ ಆ ವನದಲ್ಲಿ ವರುಣನೆಂದು ಪ್ರಸಿದ್ಧನಾದ, ಋಷಿಶ್ರೇಷ್ಠನಾದ ಒಬ್ಬ ತಪಸ್ವಿಯು ಇದ್ದನು. ಅವನಿಗೆ ತಪಸ್ಸುಗಳಿಗೆ ನಿಕ್ಷೇಪಸ್ವರೂಪನಾದಂಥ, ಯೋಗಿಗಳಲ್ಲಿ ಶ್ರೇಷ್ಠನಾದಂಥ, ಸದಾ ಯಥಾರ್ಥದಲ್ಲಿ ತತ್ಪರನಾದಂಥ, ಭೃಗುವೆಂಬೋರ್ವ ಪುತ್ರನಿದ್ದನು. ಆತನು ಒಂದಾನೊಂದು ದಿವಸದಲ್ಲಿ ತಮ್ಮ ತಂದೆಯಾದ ವರುಣನ ಸಮೀಪಕ್ಕೆ ಬಂದು, ಪ್ರದಕ್ಷಿಣಪೂರ್ವಕವಾಗಿ ಸಾಷ್ಟಾಂಗ ನಮಸ್ಕಾರವಂ ಮಾಡಿ, ತತ್ವಾರ್ಥಸೂಚಕವಾದ, ಗಂಭೀರವಾದ ಒಂದು ಉತ್ತಮವಾದ ಮಾತನ್ನು ಆಡಿದನು.

ಅಧೀಹಿಭಗವನ್ಬ್ರಹ್ಮಯದುಪಾಸ್ಯಂಮುನೀಶ್ವರೈಃ ।
ವರುಣಸ್ತಮುವಾಚೆತ್ಥಂ ಪುತ್ರಂಸತ್ಯಪರಾಯಣಂ ॥

ಟೀ ॥ ಎಲೈ ಭಗವಂತನೆ ಯಾವದು ಮುನೀಶ್ವರರಿಂದುಪಾಸಿಸ ತಕ್ಕುದೋ ಆ ಬ್ರಹ್ಮವಂ ಹೇಳಿಕೊಡು ಎಂದು ಭೃಗುವು ಕೇಳುವಲ್ಲಿ ಯಥಾರ್ಥವಾದ ವಾಕ್ಯವೆ ಮುಖ್ಯವಾಗಿರುವ ಆ ಮಗನಂ ಕುರಿತು ವರುಣನು ಪೇಳಿದನು. ಅದೆಂತೆಂದರೆ,

ವಿಜಿಜ್ಞಾಸಸ್ವ ತದ್ಬ್ರಹ್ಮ ತಪಸಾನಿಯಮೇನಚ ।
ತದೇವಪರಮಂಬ್ರಹ್ಮ ಸರ್ವಲೋಕೇಷುವಿಶ್ರುತಂ ॥

ಟೀ ॥ ಯಾವದರದೆಸೆಯಿಂದೀಪ್ರಾಣಿಗಳು ಪುಟ್ಟುವವೊ, ಯಾವದರಿಂ ಜೀವಿಸುವವೊ, ಎಲ್ಲಿ ಲಯಿಸುವವೊ ಅದು ಪರಬ್ರಹ್ಮವೆಂದು ವೇದಗಳಲ್ಲಿಯೂ ಸರ್ವಲೋಕಗಳಲ್ಲಿಯೂ ಪ್ರಸಿದ್ಧವಾಗಿರುವದು. ಆ ಬ್ರಹ್ಮವನ್ನು ಸ್ನಾನಾದಿ ನಿಯಮದಿಂದಲೂ ಆಲೋಚನೆಯಿಂದಲೂ ತಿಳಿಯುವನಾಗು ಎಂದು ವರುಣನು ಪೇಳಲಾಗಿ,

ತಪಸ್ತಪ್ತ್ವಾಭೃಗುಃಪ್ರೇಮ್ಣಾ ಸಿದ್ಧಮೇವವಿಬೋಧತಃ ।
ವ್ಯಜಾನಾದನ್ನಮೇವೇದಂ ಬ್ರಹ್ಮಶಬ್ದಾಭಿಲಾಷಿತಂ ॥

ಅನ್ನಾದೇವಹಿಭೂತಾನಿ ಜಾಯಂತೆಖಲುಸರ್ವದಾ ।
ಜಾತಾನ್ಯನ್ನೆನವರ್ಧಂತೆ ಸರ್ವಭೂತಾನಿನಿತ್ಯಶಃ ॥
ಅದ್ಯತೆಸರ್ವಭೂತ್ಯೆಶ್ಚ ಸ್ವಯಮನ್ನಂ ಮಹತ್ತರಂ ।
ಅತ್ತಿ ಸರ್ವಾಣಿಭೂತಾನಿ ಸ್ವಯಮೇವ ಮಹಾಂತಿಚ ॥
ತಸ್ಮಾದನ್ನಮಿತಿಪ್ರೋಕ್ತಂ ಮುನಿಭಿಶ್ಶಂಸಿತವ್ರತೈಃ ।
ಏವಮನ್ನಮಯಂಕೋಶಂ ಜ್ಞಾತ್ವಾಬ್ರಹ್ಮೇತಿವಾರುಣಿಃ ॥
ತಸ್ಮಿನ್ನಪರಿತುಷ್ಟಸ್ಸನ್ ಪುನಃಪಿತರಮಭ್ಯಗಾತ್ ॥

ಟೀ ॥ ಬಳಿಕ ಭೃಗುವು ಜ್ಞಾನದಿಂದಾಲೋಚಿಸಿ ಪ್ರೇಮದಿಂ ಸಿದ್ಧವಾದ ಅನ್ನಮಯಕೋಶವನ್ನೇ ಬ್ರಹ್ಮ ಶಬ್ದಾರ್ಥವನ್ನಾಗಿ ತಿಳಿದನು. ಅನ್ನಮಯಕೋಶವೆನಿಸುವ ಸ್ಥೂಲ ಶರೀರದಿಂದಲೇ ಪ್ರಾಣಿಗಳು ಪುಟ್ಟುವವು. ಪುಟ್ಟಿದ ಪ್ರಾಣಿಗಳೆಲ್ಲವೂ ಇದರಿಂದಲೇ ಬೆಳೆಯುವವು. ಸ್ಥಿರ ಪ್ರಾಣಿಗಳ ಶರೀರವಿದರಿಂ ತಿನ್ನಲ್ಪಡುವದು. ಚರಪ್ರಾಣಿಗಳಿಂದಿದು ತಿನ್ನಲ್ಪಡುವದು. ಅದುಕಾರಣ ಈ ಶರೀರವೇ ಅನ್ನವೆಂದು ಮುನಿಗಳಿಂ ಪೇಳಲ್ಪಡುವದು. ಈ ಶರೀರವೇ ಬ್ರಹ್ಮವೆಂದು ತಿಳಿದ ಭೃಗುವು ಅದರಲ್ಲಿ ಸಂತುಷ್ಟನಾಗದೆ ಮರಳಿ ತಂದೆಯ ಸಮೀಪಕ್ಕೆ ಬಂದನು.

ಯಥಾಪೂರ್ವಂಸಮಭ್ಯರ್ಚ್ಯ ಪಿತರಂಸತ್ಯವಾದಿನಂ ।
ಅಧೀಹಿಪರಮಂಬ್ರಹ್ಮ ತಾತಸತ್ಯಪರಾಯಣ ।
ಇತ್ಯುಕ್ತಸ್ತೆನತತ್ಪುತ್ರ ಬಭಾಷೆ ವರುಣಸ್ಸ್ವಯಂ ।
ವಿಜಿಜ್ಞಾಸಸ್ವತಪಸಾ ಪ್ರಾಣೋಬ್ರಹ್ಮೇತಿ ಪುತ್ರಕ ।
ತಪಸ್ತಪ್ತ್ವಾಭೃಗುಶ್ಶ್ರೀಮಾನ್ಪ್ರಾಣೊಬ್ರಹ್ಮೇತ್ಯಬೊಧಿಸಃ ।
ಯಥಾಪೂರ್ವಂತಪಸ್ತಪ್ತ್ವಾಮನೊಬ್ರಹ್ಮೇತ್ಯಬೋಧಿಸಃ ।
ತತ್ರಾಪ್ಯಪರಿತುಷ್ಟಸ್ಸನ್ಯಥಾಪೂರ್ವಂ ತಪೊಗ್ರಹೀತ್ ।
ವಿಜ್ಞಾನಮೇವಬ್ರಹ್ಮೇತಿ ನಿಶ್ಚಿಕಾಯಮಹಾಮತಿಃ ।
ಅಸಂತುಷ್ಟಸ್ತಥಾಜ್ಞಾನಾತ್ಪುನಃಪಿತರಮುಕ್ತವಾನ್ ॥

ಟೀ ॥ ಪೂರ್ವದಂತೆ ಸತ್ಯವಾದಿಯಾದ ತಂದೆಯಂಪೂಜಿಸಿ ಎಲೈ ಸತ್ಯವ್ರತನಾದ ತಂದೆಯೇ ಪರಬ್ರಹ್ಮವನ್ನು ಹೇಳಿಕೊಡುವನಾಗೆಂದು ಕೇಳಿದನು ಬಳಿಕಾವರುಣನು ಚಂನಾಗಿ ವಿಚಾರವಂ ಮಾಡುವನಾಗೆಂದು ತಾನಾಗಿ ಪೇಳಿದನು. ಬಳಿಕ ಪೂಜ್ಯನಾದ ಭೃಗುವು ಆಲೋಚಿಸಿ ಮೊದಲು

ಪ್ರಾಣವೇ ಬ್ರಹ್ಮವೆಂದು ತಿಳಿದನು ಅದರಲ್ಲಿ ಸಂತೋಷವಿಲ್ಲದಾ ಭೃಗುವು ಪೂರ್ವದಂತೆ ವಿಚಾರಿಸಿ ಮತ್ತೆ ಮನವೇ ಬ್ರಹ್ಮವೆಂದು ತಿಳಿದನು. ಅದರಲ್ಲೂ ಸಂತುಷ್ಟನಾಗದೆ ಪೂರ್ವದಂತೆ ವಿಚಾರವಂ ಪಿಡಿದ ಮಹಾಮತಿಯು ವಿಜ್ಞಾನವೇ ಬ್ರಹ್ಮವೆಂದು ನಿಶ್ಚೈಸಿದನು ಅದರಿಂದಲೂ ಸಂತುಷ್ಟನಾಗದೆ ಮರಳಿ ತಂದೆಯಂಕುರಿತು ಪೇಳಿದನು.

ವಿಜ್ಞಾನಮೇವಬ್ರಹ್ಮೇತಿ ತಾತಬುದ್ಧಂಮಯಾಧುನಾ ।
ತಸ್ಮಾನ್ನಮೇಸ್ತಿಸಂತೋಷೋ ನಜಾತಂಬ್ರಹ್ಮಶಾಶ್ವತಂ ।
ಅತೋಬ್ರೂಹಿಪರಂಬ್ರಹ್ಮಯೇನತುಷ್ಯಾಮ್ಯಹಂಪ್ರಭೋ ।
ಏವಮುಕ್ತಸ್ಸಪುತ್ರೇಣ ಪಿತಾವಚನಮಬ್ರವೀತ್ ॥

ಟೀ ॥ ಎಲೈ ತಂದೆಯೇ ನೀನು ಪೇಳಿದಂತೆ ಪ್ರಾಣಮಯಕೋಶವಂ ಬ್ರಹ್ಮವೆಂದು ತಿಳಿದೆನು ಅದರಿಂ ಸತೋಷವಿಲ್ಲದ್ದರಿಂದ ಮನೋಮಯಿಕೋಶವನ್ನೂ ವಿಜ್ಞಾನಮಯಕೋಶವನ್ನೂ ವಿಚಾರಿಸುತ್ತಿದ್ದ ನಾನು ಈಗ ವಿಜ್ಞಾನವನ್ನೆ ಬ್ರಹ್ಮವೆಂದು ತಿಳಿದಿರುವೆನು. ಅದರಿಂದಲೂ ನನಿಗೆ ಸಂತೋಷವಿಲ್ಲದ್ದರಿಂ ಶಾಶ್ವತವಾದ ಬ್ರಹ್ಮವು ತಿಳಿಯಲ್ಪಡದಿರುವದು ಆದ್ದರಿಂದ ಎಲೈ ಪ್ರಭುವೇ ಯಾವದರಿಂ ನಾನು ಸಂತುಷ್ಟನಾಗುವೆನೋ ಆ ಬ್ರಹ್ಮವಂ ನನಿಗೆ ಪೇಳಿಕೊಡುವನಾಗು ಎಂದು ಪುತ್ರನಿಂ ಪೇಳಲ್ಪಟ್ಟ ಆ ವರುಣನು ಈ ವಚನವಂ ಪೇಳಿದನು ಅದು ಯಾವುದೆಂದರೆ.

ಆನಂದ ಏವಬ್ರಹ್ಮೇತಿ ಜಗಜ್ಜನ್ಮಾದಿಕಾರಣಂ ।
ಆನಂದಾಬ್ಧಿಘನೀಭೂತಂ ಶರೀರಂಪರಮೇಶಿತುಃ ॥
ಆನಂದವಿಗ್ರಹಶ್ರೀಮಾನ್ ಶಿವಃಪರಮಕಾರಣಃ ।
ಶಿವಾರ್ಥವಿಗ್ರಹೆದೆವೀ ಭಾಸತೆಯಾಮಹತ್ತರಾ ॥
ಸ್ವಾಭಾವಿಕೀಜ್ಞಾನರೂಪಾ ಬಲರೂಪಾಕ್ರಿಯಾತ್ಮಿಕಾ ।
ಆತ್ಮಭೂತಾಹಿದೇವಸ್ಯಸರ್ವಾಂತರ್ಯಾಮಿನಃಪ್ರಭೋಃ ॥
ಸಾಕಲ್ಯಾಣಗುಣೈರ್ದಿವ್ಯೈರ್ನಿಗೂಢಾಪರಮೇಶ್ವರೀ ।
ತದಂಶಭೂತಾಪ್ರಕೃತಿಃ ಪ್ರಪಂಚಪರಿಣಾಮಿನೀ ॥

ಟೀ ॥ ಎಲೈ ತನುಜನೆ ಜಗತ್ತಿನ ಜನ್ಮ, ಸ್ಥಿತಿ, ಲಯ, ತಿರೋಧಾನ, ಅನುಗ್ರಹಗಳೆಂಬ ಪಂಚಕೃತ್ಯಗಳಿಗೆ ಕಾರಣವಾದ ಆನಂದಾತ್ರ

ಯುವಾದ ವಸ್ತುವೇ ಬ್ರಹ್ಮವು ಶಿವನ ಶರೀರವು ಆನಂದವೆಂಬ ಸಮುದ್ರದ ಗಟ್ಟಿಯಾಗಿರುವದು ಪೂಜ್ಯನಾದಂಥಾ ಪರಮಕಾರಣನಾದ ಶಿವನು ಆನಂದವಿಗ್ರಹನಾಗಿರುವನು. ಶಿವನಸ್ವರೂಪದ ಅರ್ಧಭಾಗದಲ್ಲಿ ಮಹತ್ತಾದ ರೂಪದಿಂದಾವಳು ಪ್ರಕಾಶಿಶುವಳೋ ಅವಳೇ ಸ್ವಭಾವಿಕವಾದಂಥಾ ಜ್ಞಾನಬಲಕ್ರಿಯಾರೂಪವಾದ ಪರಶಕ್ತಿಯು ಸರ್ವಾಂತರ್ಯಾಮಿಯಾದ ಪರಶಿವನಿಗೆ ವಿಗ್ರಹರೂಪಳಾಗಿರುವಳು ಪ್ರಕಾಶಿಸುತ್ತಿರುವ ಶುಭಕರವಾದ ಗುಣಗಳಿಂದಾ ಪರಮೇಶ್ವರಿಯು ಗೂಢವಾಗಿರುವಳು ಅವಳ ಅಂಶದಿಂ ಪುಟ್ಟಿದ ಪ್ರಕೃತಿಯು ಪ್ರಪಂಚಾಕಾರವಾಗಿ ಪರಿಣಮಿಸುವದು.

ಆಕಾಶಶಬ್ದವಾಚ್ಯಾಸಾ ದೇವೀಗಿರಿವರಾತ್ಮಜಾ |
ಸಾಸ್ವಾದಶೇಷಆಕಾಶ ಆನಂದೊಬ್ರಹ್ಮಲಕ್ಷಣಃ ||
ಕೊಹ್ಯೆವಾನ್ಯಾಚ್ಚಕಃಪ್ರಾಣ್ಯಾದಿತ್ಯಾದಿಶ್ರುತಿಬೋಧಿತಃ |
ಯೋಗೆನಾಕಾಶಶಬ್ದೊಯಂವ್ಯಾಚಷ್ಟೆಗಿರಿಕನ್ಯಕಾಂ ||

ಟೀ || ಗಿರಿಶ್ರೇಷ್ಠನಿಗೆ ಮಗಳಾದ ದೇವಿಯು ಆಕಾಶ ಶಬ್ದಕ್ಕೆ ವಾಚ್ಯಳಾಗಿರುವಳು ಈ ಆಕಾಶವೆಂದು ಪ್ರಸಿದ್ಧವಾಗಿರುವದು ಯಾವದೋ ಈ ರೂಪದಿಂದಾ ದೇವಿಯೇ ಇರುವಳು ಆಕಾಶರೂಪವಾಗಿ ಬ್ರಹ್ಮಲಕ್ಷಣವಾದೀ ಆನಂದವಿಲ್ಲದಿದ್ದರೆ ಯಾವನು ತಾನೆ ಉಸುರನ್ನೊಳಕ್ಕೆ ಶೆಳಕೊಂಡಾನು, ಹೊರಕ್ಕಾದರೂ ಬಿಟ್ಟಾನು, ಎಂಬುದೇ ಮೊದಲಾದ ಶ್ರುತಿಗಳಿಂ ತಿಳುಹಲ್ಪಟ್ಟ ಈ ಯಾಕಾಶಶಬ್ದವು ಆ ಸಮಂತಾತ್ಕಾಶತೆ ಎಂಬ ವಿಗ್ರಹದಿಂ ಪಾರ್ವತಿಯಂ ಪೇಳುವದು.

ಬ್ರಹ್ಮಾಕಾಶಶರೀರಂಹಿ ಶಿವೆಶಾನಾದಿಶಬ್ದಿತಂ |
ಇತ್ಯುಕ್ತ್ವಾತ್ವರುಣಶ್ರೀಮಾನ್ಮೋದಯಾಮಾಸಪುತ್ರಕಂ ||
ತಸ್ಮಾತ್ಪಂಚಸುಕೋಶೆಷು ಬಾಹ್ಯೊನ್ನ ಮಯಈರಿತಃ |
ತಸ್ಯಸಂಸ್ಕಾರಕರಣಾತ್ಕಾಶುದ್ಧಿರುಪಜಾಯತೆ ||
ಸುರಾಪೂರಿತಭಾಂಡಸ್ಯಬಾಹ್ಯಪ್ರಕ್ಷಾಳನಾದಿನಾ |
ಶುದ್ಧಿಸ್ಸಂಜಾಯತೆಕಾವಾ ವದತಬ್ರಾಹ್ಮಣೊತ್ತಮಾಃ ||

ಟೀ || ಶಿವ ಈಶಾನಾದಿಶಬ್ದಗಳಿಂಪೇಳಲ್ಪಟ್ಟ ಬ್ರಹ್ಮವು ಆಕಾಶವೇ ಶರೀರವಾಗಿಉಳ್ಳಂಥಾದ್ದಲ್ಲವೇ ಎಂದು ಶ್ರೀಮಂತನಾದ ವರುಣನು

ಪೇಳಿ ಮಗನಂ ಸಂತೋಷಪಡಿಸಿದನು ಆದಕಾರಣ ಪಂಚಕೋಶಗಳಲ್ಲಿ ಅನ್ನಮಯಕೋಶವು ಬಾಹ್ಯವಾಗಿ ಪೇಳಲ್ಪಟ್ಟಿರುವದು ಅದಕ್ಕೆ ಸಂಸ್ಕಾರವಂ ಮಾಡಿದ್ದರಿಂದಾವಶುದ್ಧಿ ಯುಂಟಾಗುವದು. ಎಲೈ ಬ್ರಾಹ್ಮಣ ಶ್ರೇಷ್ಠರೆ ಹೆಂಡವಂತುಂಬಿದ್ದ ಗಡಿಗೆ ತೊಳೆಯುವದೇ ಮೊದಲಾದ ಹೊರಗಣ ವ್ಯಾಪಾರದಿಂದಾವಶುದ್ಧಿಯಾಗುವದು ಪೇಳುವರಾಗಿರಿ.

ತದಂತರಸ್ಯಜೀವಸ್ಯಕಾರ್ಯಾಶುದ್ಧಿರ್ಮಹತ್ತರೈಃ |
ಸಿದ್ಧಾಸಾಹಿವಿಶುದ್ಧಿರ್ಮೆ ಲಿಂಗಧಾರಣದೀಕ್ಷಯಾ ||
ಗುರುಣಾಮಸ್ತಕೆಹಸ್ತೆ ನಿಕ್ಷಿಪ್ತೆಜ್ಞಾನರೂಪಿಣಾ |
ನಿರ್ದಗ್ಧಂಕಾರಣಾಂಗಂಮೆತವೊರೂಪಂಮಹತ್ತರಂ ||
ತತ್ರತ್ಯಾಚಕಲಾಶೈವೀ ಭಾವಗಮ್ಯಾತತೊಭವತ್ |

ಟೀ || ಹೊರಗಣದೇಹಕ್ಕೆ ಶುದ್ಧಿಯಾಗಲಾರದಕಾರಣ ಒಳಗಣ ಜೀವಕ್ಕೆ ಶುದ್ಧಿಯು ದೊಡ್ಡವರಿಂದ ಮಾಡತಕ್ಕದ್ದು. ಲಿಂಗಧಾರಣ ದೀಕ್ಷೆಯಿಂದಾ ಶುದ್ಧಿಯು ನನಿಗೆ ಸಿದ್ಧವಾಗಿರುವದು ಜ್ಞಾನಸ್ವರೂಪನಾದ ಗುರುವಿನಿಂದ ಶಿರದೊಳ್ ಹಸ್ತವಿಡಲ್ಪಡುವಲ್ಲಿ ಮಹತ್ತಾಗಿರುವ ಅಜ್ಞಾನರೂಪವಾದ ನನ್ನ ಕಾರಣ ಶರೀರವು ದಗ್ಧವಾದುದು. ಅದರಿಂದಲ್ಲಿದ್ದ ಶೈವಕಲೆಯು ನನ್ನ ಭಾವವಂ ಹೊಂದಿರುವದು.

ಭಾವಸ್ಯಚಿತ್ತಜನ್ಯತ್ವಾನ್ಮನೊಗಮ್ಯಾಕಲಾಪರಾ |
ಸರ್ವೇಂದ್ರಿಯಸನಾಥತ್ವಾನ್ಮನಸೊಬ್ರಾಹ್ಮಣೊತ್ತಮಾಃ ||
ಸರ್ವೆಂದ್ರಿಯೈಸ್ಸಹಪ್ರಾಣ್ಯೈ ರ್ನಷ್ಟಪ್ರಾಯಂಮನೊಭವತ್ |
ನಷ್ಟೆಮನಸಿಮೆಪ್ರಾಣಾನಷ್ಟಾವಾಯುಸ್ವರೂಪಿಣಃ ||
ಪ್ರಾಣವರ್ಗೇಪ್ರಣಷ್ಟೆತು ಸ್ಥೂಲದೇಹಸ್ತಥಾಭವತ್ |
ಸ್ಥೂಲಸೂಕ್ಷ್ಮಶರೀರಸ್ಯಕಾರಣಂಭೂತಪಂಚಕಂ ||
ನಿವಾತದೆಶನಿರ್ದಗ್ಧ ಪಟವತ್ಪ್ರತಿಭಾಸತೆ |

ಟೀ || ಮನದಲ್ಲಿ ಪುಟ್ಟಿದ್ದಾದ್ದರಿಂದಾ ಶೈವಕಲೆಯು ಮನವಂ ಪೊಂದಿತು. ಎಲೈ ಬ್ರಾಹ್ಮಣ ಶ್ರೇಷ್ಠರೇ ಮನಸ್ಸು ಸರ್ವೆಂದ್ರಿಯಗಳಿಂ ಕೂಡಿರುವದಾದ್ದರಿಂದ ಇಂದ್ರಿಯಗಳೊಡನೆ ಮನವು ನಷ್ಟಪ್ರಾಯವಾಗಿರುವದು. ಮನವು ನಷ್ಟವಾದ್ದರಿಂದ ನನ್ನ ವಾಯುರೂಪವಾದ

ಪ್ರಾಣಗಳು ನಷ್ಟವಾಗಿರುವವು. ಪ್ರಾಣವರ್ಗವು ನಷ್ಟವಾದ್ದರಿಂದ ಸ್ಥೂಲದೇಹವು ಹಾಗೇ ನಷ್ಟವಾಗಿರುವದು ಸ್ಥೂಲಸೂಕ್ಷ್ಮ ಶರೀರಕ್ಕೆ ಕಾರಣವಾದ ಭೂತಪಂಚಕವು ಗಾಳಿಯಿಲ್ಲದ ಸ್ಥಳದಲ್ಲಿ ಸುಟ್ಟ ಬಟ್ಟೆಯಂತೆ ಕಾಣ್ಬರುವದು.

ಶುಕ್ಲಶೋಣಿತಸಂಜನ್ಯಂ ಶರೀರಂಭೌತಿಕಂಮಮ ।
ತತೋಗುರುರ್ಮಹಾಯೋಗೀಕೃಪಾವಾನಮಿತದ್ಯುತಿಃ ॥
ಪೃಥ್ವೀಸ್ಥಾನೆನಕಾರಂಚ ಲಿಂಗಮಾಚಾರಸಂಜ್ಞಕಂ ।
ಜಲಸ್ಥಾನೆಮಕಾರಂಚಗುರುಲಿಂಗಂಮಹತ್ತರಂ ॥
ತೆಜಸ್ಥಾನೆಶಿಕಾರಂತುಶಿವಲಿಂಗಂಚಶಾಶ್ವತಂ ।
ವಾಕಾರಂಪವನಸ್ಥಾನೆ ಚರಲಿಂಗಂಶಿವಾತ್ಮಕಂ ॥
ವಿಯತ್ಸ್ಥಾನೆಯಕಾರಂಚ ಲಿಂಗಂಪ್ರಾಸಾದಸಂಜ್ಞಕಂ ।
ಪ್ರಣವಂಚಾತ್ಮನಸ್ಥಾನೆ ಮಹಾಲಿಂಗಂತುಚಿನ್ಮಯಂ ॥
ಕೃತ್ವಾಮಂತ್ರಮಯಂದೇಹಂ ಸಸರ್ಜಾನ್ಯಂಸ್ವಶಕ್ತಿತಃ ।
ಅತೋಮಂತ್ರಮಯಸ್ಯಾಸ್ಯ ಲಿಂಗಕಸ್ಯದ್ವಿಜೋತ್ತಮಾಃ ॥
ಪ್ರಾಕೃತಸ್ಯೆವಸಂಸ್ಕಾರಮೆನಂನಾಂಗೀಕರೊಮ್ಯಹಂ ।

ಟೀ ॥ ಶುಕ್ಲ ಶೋಣಿತ ಸಂಯೋಗದಿಂದ ಪುಟ್ಟಿದ ನನ್ನ ಶರೀರವು ಪಾಂಚಭೌತಿಕವಾಗಿದ್ದದ್ದು ಅದುಕಾರಣ ಮಹಾಯೋಗಿಯಾಗಿ ಅಪಾರವಾದ ತೇಜಸ್ಸುಳ್ಳ ಗುರುವು ಕೃಪಾವಂತನಾದನು ಪೃಥ್ವೀಸ್ಥಾನದಲ್ಲಿ ನಕಾರರೂಪವಾದಾಚಾರ ಲಿಂಗವನ್ನೂ ಜಲಸ್ಥಾನದಲ್ಲಿ ಮಕಾರರೂಪವಾಗಿರುವ ಮಹತ್ತಾದ ಗುರುಲಿಂಗವನ್ನೂ ತೇಜಸ್ಥಾನದಲ್ಲಿ ಶಿಕಾರರೂಪವಾದ ಶಾಶ್ವತವಾದ ಶಿವಲಿಂಗವನ್ನೂ ಆಕಾಶಸ್ಥಾನದಲ್ಲಿ ಯಕಾರರೂಪವಾದಂಥಾ ಪ್ರಸಾದವೆಂಬ ಲಿಂಗವನ್ನೂ ಆತ್ಮಸ್ಥಾನದಲ್ಲಿ ಪ್ರಾಣರೂಪವಾದಂಥಾ ಚಿದ್ರೂಪವಾದ ಮಹಾಲಿಂಗವನ್ನು ಶಕ್ತಿಯಿಂದಿಟ್ಟು ಮಂತ್ರಮಯವಾದಕಾರಣ ದೇಹವನ್ನು ಅಪ್ರಾಕೃತವನ್ನಾಗಿ ಮಾಡಿದೆನು. ಆದುದರಿಂದ ಮಂತ್ರಮಯವಾದ ಈ ದೇಹಕ್ಕೆ ಪ್ರಾಕೃತವಾದ ದೇಹದಂತೆ ಇತರ ಸಂಸ್ಕಾರವನ್ನು ನಾನೆಂದಿಗೂ ಅಂಗೀಕರಿಸುವುದಿಲ್ಲ.

ಇತ್ಯುಕ್ತ್ವಾ ಬಸವೇಶ್ವರಸ್ತು ಮುನಿಭಿಶ್ಶ್ಲಾಘ್ಯಮಾನಃಪರಂ |
ವಾಕ್ಯಂವಾಕ್ಯವಿದಗ್ರಣೀಸ್ಸುರುಚಿರಂಶೈವಪ್ರಮೋದಾವಹಂ ||
ಪ್ರಾಲೇಯಾಚಲತುಲ್ಯಧೈರ್ಯಕಲಿತಸ್ತಸ್ಮಿನ್‌ಸ್ಥಿತಸ್ಸಸ್ಮಿತೋ |
ದಂತಾಳ್ಯುದ್ಗತಕಾಂತಿಸಂಚಯಪರಿಭ್ರಾಜದ್ದಿಗಂತಃಕ್ಷಣಂ ||

ಇತಿ ಶ್ರೀ ಬಸವೇಶ್ವರಪುರಾಣೆ ಸ್ಕಂದಾಗಸ್ತ್ಯಸಂವಾದೆ
ಕರ್ಮನಿರಾಸೋನಾಮ ಪಂಚಮೋಧ್ಯಾಯಃ ||

ಟೀ || ವಾಕ್ಯವಂ ತಿಳಿದವರ್ಗಗ್ರಗಣ್ಯನಾಗಿ ಅತ್ಯಂತವಾಗಿ ಮುನಿಗಳಿಂ ಶ್ಲಾಘಿಸಲ್ಪಡುವ ಬಸವೇಶ್ವರನು ಮನೋಹರವಾಗಿಯುಂ ಶೈವರಿಗೆ ಸಂತೋಷಕರವಾಗಿಯುಂ ಇರುವ ಈ ಪ್ರಕಾರವಾದ ವಾಕ್ಯಮಂ ಪೇಳಿ ಹಿಮಗಿರಿಗೆ ಸಮಾನವಾದ ಧೈರ್ಯದಿಂದಲಂಕೃತನಾಗಿ ಮುಗುಳುನಗೆಯಿಂ ಕೂಡಿದವನಾದ ಕಾರಣ ದಂತಪಙ್ತ್ತಿಯಿಂ ಪೊರಮಡುವ ಕಾಂತಿಸಮೂಹದಿಂ ಪ್ರಕಾಶಿಸುವ ದಿಗಂತಗಳುಳ್ಳವನಾಗಿ ಇದ್ದನೆಂಬಲ್ಲಿಗೆ ಬಸವಪುರಾಣದೊಳ್ ಸ್ಕಂದಾಗಸ್ತ್ಯಸಂವಾದದಲ್ಲಿ ಕರ್ಮನಿರಾಸವೆಂಬೈದನೆ ಅಧ್ಯಾಯವು ಸಮಾಪ್ತವಾದುದು.

---

ಅಥ ಕರ್ಮನಿರಸನ ಪ್ರತಿಪಾದಿತ ಷಷ್ಠೋಧ್ಯಾಯ ಪ್ರಾರಂಭಃ

ಅಗಸ್ತ್ಯಃ |

ತತಃ ಕಿಮಕರೋದ್ಬಾಲೋಧೈರ್ಯವಾನ್ಬಸವೇಶ್ವರಃ |
ಷಡಾನನಮಹಾಭಾಗತನ್ಮೆಬ್ರೂಹಿಸಮಾಸತಃ ||

ಕುಮಾರಃ |

ಏವಮುಕ್ತ್ವಾತತೋಬಾಲಃ ಕ್ಷಣಮೇವಂವ್ಯಚಿಂತಯತ್ |
ತಾತೋಮೆದುಷ್ಟಹೃದಯಃಪಾಷಂಡಾಚಾರತತ್ಪರಃ ||
ಸರ್ವದಾವಶಮಾಪನ್ನೋಬ್ರಾಹ್ಮಣಾನಾಂದುರಾತ್ಮನಾಂ |
ಮಯಾಸಂಬೋಧ್ಯಮಾನೋಪಿ ನೂನಂನ್ನೈವನಿವರ್ತತೆ ||
ಅತ್ಯಂತಮೂರ್ಖಹೃದಯಃಪಾಪಕರ್ಮೈಕ ತತ್ಪರಃ |
ತಥಾಪಿಬೋಧಯಿಷ್ಯಾಮಿ ಸನ್ಮಾರ್ಗಂತುಶುಭಪ್ರದಂ ||

ಎಲೈ ಭಾಗ್ಯವಂತನಾದ ಷಣ್ಮುಖನೆ ಆಮೇಲೆ ಬಸವೇಶ್ವರನೇನು ಮಾಡಿದನು ? ನನಗೆ ಸಂಕ್ಷೇಪವಾಗಿ ಪೇಳೆಂದ ಅಗಸ್ತ್ಯನ ಪ್ರಶ್ನೆಗೆ ಕುಮಾರಸ್ವಾಮಿ ಪೇಳಿದನದೆಂತೆನೆ,—ಆ ಬಳಿಕ ಬಾಲನಾದ ಬಸವೇಶ್ವರನು ಪೂರ್ವೋಕ್ತಪ್ರಕಾರವಾಗಿ ಪೇಳಿ, ಒಂದು ಕ್ಷಣ ಆಲೋಚಿಸಿದನು. ಪಾಷಂಡಾಚಾರವೇ ಮುಖ್ಯವಾಗಿರುವನಾದಕಾರಣ ದುಷ್ಟ ಹೃದಯನಾದ ನನ್ನ ತಂದೆಯು ದುರ್ಬುದ್ಧಿಗಳಾದ ಬ್ರಾಹ್ಮಣರಿಗೆ ಸರ್ವಕಾಲದಲ್ಲೂ ವಶನಾಗಿ ನನ್ನಿಂದ ತತ್ವಾರ್ಥವಂ ತಿಳುಹಲ್ಪಟ್ಟಾಗ್ಯೂ ಹಿಂತಿರುಗುವುದಿಲ್ಲ. ಪಾಪಕರ್ಮದಲ್ಲತ್ಯಂತಾಸಕ್ತನಾದ್ದರಿಂದ ಅತ್ಯಂತ ಮೂರ್ಖಹೃದಯನಾಗಿರುವನು. ಆದರುಂ ಇವರಿಗೆ ಶುಭಪ್ರದವಾದ ಸನ್ಮಾರ್ಗವಂ ತಿಳುಹುವೆನು.

ಇತಿಸಂಚಿಂತ್ಯಮನಸಾಬ್ರಾಹ್ಮಣಾನ್ಪ್ರತ್ಯಭಾಷತ |
ಇತಿಹಾಸಂಪ್ರವಕ್ಷ್ಯಾಮಿ ಶೃಣುತಬ್ರಾಹ್ಮಣೋತ್ತಮಾಃ ||
ಯಸ್ಯಶ್ರವಣಮಾತ್ರೇಣ ನಾಶಮಾಪ್ನೋತಿಕಿಲ್ಬಿಷಂ |
ಪುರಾಶ್ವಲಾಯನೋನಾಮ ಮುನಿಃ ಪರಮಧಾರ್ಮಿಕಃ ||
ಅಧೀತ್ಯಚತುರೋವೇದಾನ್ ಸರ್ವಾಂಗೈಶ್ಚ ಸಮನ್ವಿತಾನ್ |
ವಿರುದ್ಧವಾಕ್ಯಶ್ರವಣಾದ್ವಿಷಣ್ಣಹೃದಯೋಭವತ್ ||
ತತಸ್ಸಚಿಂತಯಾಮಾಸ ಕೇನವೈತನ್ನಿವಾರ್ಯತೆ |
ಅನೇಕಶಾಖಾಸಂಭಿನ್ನಾವೇದಾಬ್ರಾಹ್ಮಣಸಂಸ್ಥಿತಾಃ ||
ಸತ್ಯಲೋಕಂ ಗಮಿಷ್ಯಾಮಿ ಪಿತಾಮಹದಿದೃಕ್ಷಯಾ |
ಏವಂ ಸಂಚಿಂತ್ಯಮನಸಾ ಬ್ರಹ್ಮಲೋಕಮವಾಪಸಃ ||

ಟೀ || ಎಂದು ಬಸವೇಶ್ವರನು ಮನದಲ್ಲಾಲೋಚಿಸಿ ಬ್ರಾಹ್ಮಣರಂ ಕುರಿತು ಕೇಳಿದನು. ಎಲೈ ಬ್ರಾಹ್ಮಣ ಶ್ರೇಷ್ಠರಿರಾ, ಒಂದು ಇತಿಹಾಸವಂ ಪೇಳುವೆನು. ಯಾವುದರ ಶ್ರವಣಮಾತ್ರದಿಂ ಪಾಪವು ನಾಶವಂ ಪೊಂದುವುದೋ ಅಂಥಾ ಇತಿಹಾಸವಂ ಪೇಳುವೆನು. ಪೂರ್ವದಲ್ಲಾಶ್ವಲಾಯನನೆಂಬ ಧಾರ್ಮಿಕಶ್ರೇಷ್ಠನಾದ ಮುನಿಯು ಷಡಂಗ ಸಮೇತವಾದ ನಾಲ್ಕು ವೇದಗಳನ್ನೋದಿ ಪರಸ್ಪರ ವಿರುದ್ಧವಾದ ವಾಕ್ಯಗಳ ಶ್ರವಣದಿಂ ದುಃಖಿತನಾದನು. ಬಳಿಕ ಬ್ರಾಹ್ಮಣರಲ್ಲಿರುವ ವೇದಗಳು ಅನೇಕ

ಶಾಖೆಗಳಂ ಭಿನ್ನವಾಗಿರುವುವು. ಇವುಗಳ ಪರಸ್ಪರ ವಿರೋಧವು ಯಾವ ನಿಂದ ತಾನೆ ತಿರಸ್ಕರಿಸಲ್ಪಡುವದು ? ಅದುಕಾರಣ ಬ್ರಹ್ಮನಂ ನೋಡಲಿ ಚ್ಛೆಯಿಂ ನಾನು ಸತ್ಯಲೋಕಕ್ಕೆ ಪೋಗುವೆನೆಂದು ಯೋಚಿಸಿ ಬ್ರಹ್ಮ ಲೋಕವನ್ನೈದಿದನು.

ತತಶ್ಚತುರ್ಮುಖಂದೃಷ್ಟ್ವಾ ಮುನಿಭಿಃಪರಿವೇಷ್ಟಿತಂ |
ಸಾಷ್ಟಾಂಗಂಪ್ರಣಿಪತ್ಯಾಶು ತುಷ್ಟಾವ ವಿವಿಧೈಸ್ತವೈಃ ||
ತತಃಪಪ್ರಚ್ಛಧಾತಾರಂ ರಹಸ್ಯಂಸ್ವಾತ್ಮನಿಸ್ಥಿತಂ |
ಅಧೀಹಿಭಗವರ್ನ್ಬ್ರಹ್ಮರ್ನ್ಬ್ರಹ್ಮವಿದ್ಯಾಂ ಸನಾತನೀಂ ||
ಸೆವ್ಯಮಾನಾಂಸದಾಸದ್ಭಿರ್ನಿಗೂಢಾಂಶ್ರುತಿಪಂಜರೆ |
ಯಯಾಚಿರಾತ್ಸರ್ವ ಪಾಪಂ ವ್ಯಪೋಹ್ಯಚತುರಾನನ |
ಪರಾತ್ಪರಂತುಪುರುಷಂ ವಿದ್ವಾನೆತಿಮಹತ್ತರಂ ||

ಟೀ || ಅನಂತರದಲ್ಲಿ ಆ ಮುನಿಯು, ವಸಿಷ್ಠಾದಿ ಮಹರ್ಷಿಗಳಿಂ ಸುತ್ತುವರೆಯಲ್ಪಟ್ಟ ಬ್ರಹ್ಮನನ್ನು ಸಾಷ್ಟಾಂಗವಾಗಿ ನಮಸ್ಕರಿಸಿ, ನಾನಾ ವಿಧಗಳಾದ ಸ್ತೋತ್ರಗಳಿಂದ ಸ್ತುತಿಸಿ ಆತ್ಮಗತವಾದ ರಹಸ್ಯವನ್ನು ಕೇಳಿ ದನು. ಏನಂದರೆ;—ಎಲೈ ಬ್ರಹ್ಮನೇ ನಿರಂತರದಲ್ಲೂ ಸತ್ಪುರುಷರಿಂದ ಸೇವಿಸಲ್ಪಟ್ಟ, ವೇದಪಂಜರದಲ್ಲಿ ಅಡಗಿರುವಂಥ, ನಿತ್ಯವಾದಂಥ ಬ್ರಹ್ಮ ವಿದ್ಯೆಯನ್ನು ಹೇಳು. ಯಾವ ಬ್ರಹ್ಮವಿದ್ಯೆಯಿಂದ ವಿದ್ವಾಂಸನು, ಶೀಘ್ರ ದಲ್ಲಿ ಸಕಲ ಪಾಪಗಳನ್ನು ಕಳೆದುಕೊಂಡು ಅತ್ಯುತ್ತಮವಾದಂಥ, ಪರವ ಸ್ತುವನ್ನು ಹೊಂದುತ್ತಾನೊ ?

ತಸ್ಮೈಸಪ್ರೊವಾಚಮುನಯೆ ಭಗವಾರ್ನ್ಚತುರಾನನಃ |
ಶ್ರದ್ಧಾಭಕ್ತಿಧ್ಯಾನಯೋಗಾ ದವೆಹೀಮಾಂಮಹತ್ತರಾಂ ||
ಜ್ಯೋತಿಷ್ಟೋಮಾದಿಕರ್ಮಾಘೈಃಪ್ರಜಯಾಚಧನೆನಚ |
ನಲಭ್ಯತೆಬ್ರಹ್ಮವಿದ್ಯಾತ್ಯಾಗೆನಮುನಿಸತ್ತಮ ||
ತ್ಯಕ್ತ್ವಾಸನುಸ್ತಕರ್ಮಾಣಿಮುನಯೋಬ್ರಹ್ಮವಾದಿನಃ ||
ಪ್ರಾಪ್ತಾಃಪೂರ್ವೇಽಮೃತತ್ವಂತು ಶಿವಧ್ಯಾನಪರಾಯಣಾಃ |
ನಾಕಂಹಿತ್ವಾತ್ಮಹೃದಯ ಗುಹಾಮಧ್ಯೆವ್ಯವಸ್ಥಿತಂ ||
ಸೂರ್ಯಕೋಟಿಪ್ರತೀಕಾಶಂ ವಿಶಂತ್ಯೆತನ್ಮನೀಶ್ವರಾಃ |
ವೇದವೇದಾಂತವಿಜ್ಞಾನ ನಿಶ್ಚಿತಾರ್ಥಾಮಹತ್ತರಾಃ ||

ಟೀ || ಈ ರೀತಿಯಾಗಿ ಪ್ರಶ್ನೆಮಾಡಿದಂಥ ಆ ಋಷಿಗೆ ಮಹಾತ್ಮನಾದ ಬ್ರಹ್ಮನು ಉತ್ತರವನ್ನು ಕೊಟ್ಟನು—ಎಲೈ ಮುನಿಯೆ ಈ ಮಹತ್ತರವಾದ ವಿದ್ಯೆಯನ್ನು ಶ್ರದ್ಧಾಭಕ್ತಿಯಿಂದಲೂ ಧ್ಯಾನಯೋಗದಿಂದಲೂ ತಿಳಿ, ಈ ಬ್ರಹ್ಮವಿದ್ಯೆಯು ಸಕಲ ವಿದ್ಯೆಗಳಲ್ಲಿಯೂ ಶ್ರೇಷ್ಠವಾದದ್ದು ಜ್ಯೋತಿಷ್ಟೋಮ ಮೊದಲಾದ ಕರ್ಮಸಮೂಹಗಳಿಂದಲೂ ಸಂತತಿಯಿಂದಲೂ, ದ್ರವ್ಯದಿಂದಲೂ, ಔದಾರ್ಯದಿಂದಲೂ ಪ್ರಾಪ್ತವಾಗುವದಿಲ್ಲ. ಪೂರ್ವದಲ್ಲಿ ಶಿವಧ್ಯಾನಪರಾಯಣರಾದ ಬ್ರಹ್ಮವಾದಿಗಳಾದ ಋಷಿಗಳು ಸಕಲ ಕರ್ಮಗಳನ್ನೂ ಬಿಟ್ಟು ಮೋಕ್ಷವನ್ನು ಹೊಂದಿದರು. ವೇದಾಂತಜ್ಞಾನದಿಂದ ದೃಢಚಿತ್ತರಾದ ಮಹಾತ್ಮರಾದ ಮುನಿಗಳು ಸ್ವರ್ಗವನ್ನು ಬಿಟ್ಟು, ತಮ್ಮ ಹೃದಯವೆಂಬ ಗುಹೆಯ ಮಧ್ಯದಲ್ಲಿರುವ ಕೋಟಿ ಸೂರ್ಯರಿಗೆ ಸಮಾನವಾದ ಪರವಸ್ತುವಿನಲ್ಲಿ ಐಕ್ಯವನ್ನು ಹೊಂದುತ್ತಾರೆ. ಈ ವಿಷಯದಲ್ಲಿ " ನಕರ್ಮಣಾನಪ್ರಜಯಾಧನೇನತ್ಯಾಗೇನೈಕೆ ಅಮೃತತ್ವಮಾನಶುಃ | ವೇದಾಂತವಿಜ್ಞಾನ ಸುನಿಶ್ಚಿತಾರ್ಥಾಸ್ಸನ್ಯಾಸಯೋಗಾದ್ಯತಯಃಶುದ್ಧಸತ್ವಾಃ | ತೆಬ್ರಹ್ಮಲೊಕೆತುಪರಾಂತಕಾಲೆ ಪರಾಮೃತಾತ್ಪರಿಮುಚ್ಯಂತಿಸರ್ವೆ " ಎಂದು ಉಪನಿಷದ್ವಚನವುಂಟು.

– ಕಾಮ್ಯಕರ್ಮಪರಿತ್ಯಾಗಸ್ಸನ್ಯಾಸ ಇತಿಕಥ್ಯತೆ |
ತದ್ಯೋಗಾದ್ಯತಯಃಪ್ರೋಕ್ತಾಶ್ಶುದ್ಧಸತ್ವಾಸ್ತುಯೆಜನಾಃ ||
ಬೃಹತ್ವಾದ್ಬ್ರಹ್ಮಣತ್ವಾಚ್ಚ ಶಿವೋಬ್ರಹ್ಮೆತಿಕಥ್ಯತೆ |
ಸೂರ್ಯಕೊಟಿಪ್ರತೀಕಾಶಶ್ಚಂದ್ರಕೋಟಿಸುಶೀತಲಃ ||
ಅರ್ಧಮಾತ್ರಾತ್ಮಕಶ್ಶ್ರೀಮಾಂತ್ಸೊಮಲೋಕ ಇತೀರಿತಃ |
ಬ್ರಹ್ಮಾಂಡಸ್ಯೊರ್ಧ್ವಭಾಗೆತುದೀಪ್ಯಮಾನೋನಿರಾಮಯಃ ||
ಬ್ರಹ್ಮಲೋಕ ಇತಿಪ್ರೋಕ್ತಸ್ಸೊಯಂಲೊಕೊಮಹಾಮುನೆ |
ವಿಶ್ವಾಕಾರೆಣಯಾಶಕ್ತಿಃ ಪರಿಣಾಮಮುಪೈತಿಹಿ |
ಪ್ರಕೃತಿಸ್ಸಾಪರೆತ್ಯುಕ್ತಾಮುನಿಭಿಶ್ಶಂಸಿತವ್ರತೈಃ ||

ಟೀ || ಕಾಮ್ಯಕರ್ಮಗಳಂ ಬಿಡುವದೇ ಸನ್ಯಾಸವೆಂದು ಪೇಳಲ್ಪಡುವದು. ಅದರ ಸಂಬಂಧದಿಂ ಶುದ್ಧ ಚಿತ್ತರಾದ ಯೋಗಿಗಳಿಗೆ ಯತಿಗಳೆಂದು ಹೇಳುವರು. ಸ್ವರೂಪತಃ ಸರ್ವತ್ರವ್ಯಾಪ್ತನಾಗಿರುವದ್ದರಿಂದಲೂ

ಮತ್ತು ಆಕಾಶದಂತೆ ಪುಟ್ಟಿದ ಪದಾರ್ಥಗಳೆಲ್ಲವಂ ವ್ಯಾಪಿಸುವುದರಿಂದಲೂ, ಶಿವನು ಬ್ರಹ್ಮವೆಂದು ಪೇಳಲ್ಪಡುವನು. ಕೋಟಿಸೂರ್ಯರಂತೆ ಪ್ರಕಾಶವಾಗಿ ಕೋಟಿ ಚಂದ್ರರಂತೆ ಶೀತಲವಾಗಿ ಅರ್ಧಮಾತ್ರಾತ್ಮಕವಾಗಿ ಪೂಜ್ಯವಾಗಿರುವ ತೇಜೋವಿಶೇಷವೇ ಸೋಮಲೋಕವೆಂದು ಪೇಳಲ್ಪಟ್ಟಿರುವದು. ಬ್ರಹ್ಮಾಂಡದ ಮೇಲ್ಗಡೆಯೊಳ್ಪ್ರಕಾಶಿಸುವ ನಿರಾತಂಕವಾದ ಲೋಕವೇ ಬ್ರಹ್ಮಲೋಕವೆಂತಲೂ ಪೇಳಲ್ಪಡುವದು. ಪ್ರಪಂಚಾಕಾರವಾಗಿ ಯಾವ ಶಕ್ತಿ ಪರಿಣಮಿಸುವದೋ ಅದೇ ಪರಾ ಪ್ರಕೃತಿಯೆಂದು ಮಹಾವ್ರತರಾದ ಮುನಿಗಳಿಂ ಪೇಳಲ್ಪಡುವದು.

ಅಥವಾಪರಶಬ್ದೇನ ಬ್ರಹ್ಮಾಪಿಪರಿಗೀಯತೆ |
ತದಂತಕಾಲೆಸಂಪ್ರಾಪ್ತೆ ಪರಸ್ಯಾದಮೃತಾಚ್ಛಿವಾತ್ ||
ಲೋಕೆವಿಜ್ಞಾನಿನಸ್ಸರ್ವೇಪರಿಮುಚ್ಯಂತಿಬಂಧನಾತ್ |
ಭವಿಸಂಸರ್ಗರಹಿತವಿವಿಕ್ತೆಚಸುಖಾವಹೆ ||
ಸುಖಾಸನಸ್ಥಿತಸ್ಸಿದ್ಧಸ್ಸಮಗ್ರೀವಾಶಿರೋಂಗವಾನ್ |
ವಿರಜಾನಲಜಂಭಸ್ಮಗೃಹೀತ್ವಾತ್ಯಂತಪಾವನಂ ||
ಅಗ್ನಿರಿತ್ಯಾದಿಭಿರ್ಮಂತ್ರೈಸ್ಸಪ್ತಭಿಶ್ಚಾಭಿಮಂತ್ರಿತಂ |
ಶರೀರೊದ್ಧೂಳನಂಕೃತ್ವಾತ್ರಿಪುಂಡ್ರಸ್ಯತುಧಾರಣಂ ||
ರುದ್ರಾಕ್ಷಧಾರಣಂಚೈವ ಷಡಕ್ಷರಜಪಸ್ತಥಾ |
ಧೃತೆಷ್ಟಲಿಂಗಪೂಜಾಚ ಸಂಸ್ಕಾರಃಪರಿಕೀರ್ತಿತಃ ||
ಆತ್ಮಾಕ್ಶ್ರಮಇತಿಖ್ಯಾತೊ ಮುನಿಭಿಸ್ತತ್ವದರ್ಶಿಭಿಃ |
ಆತ್ಮಾಕ್ಶ್ರಮಸ್ಥಸ್ಸಕಲಾನೀಂದ್ರಿಯಾಣಿಪ್ರಯತ್ನತಃ ||
ನಿರುಧ್ಯಸ್ವೀಯಮಾಚಾರ್ಯಂಭಕ್ತ್ಯಾಸಂಪ್ರಣಮೇದ್ಬುಧಃ |

ಟೀ || ಅಥವಾ ಪರವೆಂದರೆ ಚತುರ್ಮುಖಬ್ರಹ್ಮನೆಂದು ಹೇಳುವರು. ಈ ಬ್ರಹ್ಮನಿಗೆ ನಾಶಸಮಯವು ಬರುವಲ್ಲಿ ಅಮೃತಸ್ವರೂಪನಾದಂಥ ತುರೀಯನಾದ ಶಿವನತ್ತಣಿಂ ಲೋಕದಲ್ಲಿರುವ ಜ್ಞಾನಿಗಳೆಲ್ಲರೂ ಸಂಸಾರ ಬಂಧದಿಂದ ಮುಕ್ತರಾಗುವರು. ಸಂಸಾರಿಗಳ ಸಂಪರ್ಕವಿಲ್ಲದೆ ರಹಸ್ಯವಾಗಿ ಸುಖಕರವಾದ ಸ್ಥಳದಲ್ಲಿ ಕುಳಿತು ಸಮವಾದ ಕಂಠಶಿರಶ್ಶರೀರವುಳ್ಳ ಸಿದ್ಧನು ವಿರಜಾಗ್ನಿಯಿಂಪುಟ್ಟಿದ ಪವಿತ್ರವಾದ ಭಸ್ಮವಂ ತೆಗೆದುಕೊಂಡು "ಅಗ್ನಿರಿತಿಭಸ್ಮ" ಮೊದಲಾದ ಏಳು ಮಂತ್ರಗಳಿಂದ

ಮಂತ್ರಿಸಿ ಉದ್ಧೂಳನವಂ ಮಾಡಿಕೊಂಡು ತ್ರಿಪುಂಡ್ರಗಳಂ ಧರಿಸಬೇಕು. ಈ ತ್ರಿಪುಂಡ್ರಧಾರಣವೂ, ರುದ್ರಾಕ್ಷಧಾರಣವೂ, ಷಡಕ್ಷರಜಪವೂ ಧರಿಸಲ್ಪಟ್ಟ ಇಷ್ಟಲಿಂಗದ ಪೂಜೆಯು ಸಹ ಸಂಸ್ಕಾರವೆಂದು ಪೇಳಲ್ಪಡುವವು. ತತ್ವಜ್ಞರಾದ ಮುನಿಗಳಿಂದಿವನು ಅತ್ಯಾಶ್ರಮಿಯನಿಸಲ್ಪಡುವನು. ಅತ್ಯಾಶ್ರಮಸ್ಥನಾದ ಪಂಡಿತನು ಸಕಲವಾದ ಇಂದ್ರಿಯಗಳಂ ಪ್ರಯತ್ನದಿಂ ತಡೆದು ತನ್ನ ಗುರುವನ್ನು ಭಕ್ತಿಯಿಂದ ನಮಿಸಬೇಕು.

ಹೃತ್ಪುಂಡರೀಕಮಮಲಂ ರಜೋಗುಣವಿವರ್ಜಿತಂ ।
ವಿಶುದ್ಧಂಪಾಪರಾಹಿತ್ಯಾದ್ವಿಶೋಕಮತಿನಿರ್ಮಲಂ ॥
ವಿಚಿಂತಯೇತ್ಸ್ವಹೃದಯಂ ತಸ್ಯಮಧ್ಯೇಮಹಾಮುನೇ ।
ದಹರಾಭಿಧಮತ್ಯಂತ ಸೂಕ್ಷ್ಮಂಸುಷಿರಮಸ್ತಿಹಿ ॥
ತಸ್ಮಿನ್ನಚಿಂತ್ಯವಿಭವ ಮವ್ಯಕ್ತಂಪರಮಾದ್ಭುತಂ ।
ಅನಂತರೂಪಂಸರ್ವೇಶಂಶಿವಂಪರಮಕಾರಣಂ ॥
ಪರಾತ್ಪರತರಂಚೈವಮಹತೋಪಿಮಹತ್ತರಂ ।
ಅಣೋರಪಿಮಹಾದೇವಮಣೀಯಾಂಸಂಸಿತಪ್ರಭಂ ॥

ಟೀ ॥ ಬಳಿಕ ರಜೋಗುಣ ವಿಲ್ಲದ್ದರಿಂದ ಮಲರಹಿತವಾಗಿಯೂ ಶುಭ್ರವಾಗಿಯೂ ಪಾಪವಿಲ್ಲದ್ದರಿಂದ ಶೋಕರಹಿತವಾಗಿಯೂ ಅಜ್ಞಾನಾದಿ ದೋಷವಿಲ್ಲದ್ದರಿಂದ ಅತ್ಯಂತ ನಿರ್ಮಲವಾಗಿಯೂ ಇರುವ ಹೃದಯಕಮಲವಂ ಚಿಂತಿಸಬೇಕು. ಎಲೈ ಮಹಾಮುನಿಯೇ, ಆದರ ಮಧ್ಯದಲ್ಲಿ ದಹರವೆಂಬ ಪೆಸರುಳ್ಳಂಥ ಅತ್ಯಂತ ಸೂಕ್ಷ್ಮವಾದ ರಂಧ್ರವಿರುವದಲ್ಲವೆ? ಅದು ಸ್ವಹೃದಯವೆನಿಸುವದು. ಆದರಲ್ಲಾಲೋಚಿಸಲಶಕ್ಯವಾದ ವೈಭವವುಳ್ಳಂಥಾ ಮತ್ತೊಂದಕ್ಕೆ ಕಾರ್ಯಮಾಗದೆ ಅತ್ಯಾಶ್ಚರ್ಯನಾಗಿ ಅನಂತವಾದ ರೂಪವುಳ್ಳಂಥಾ ಸಮಸ್ತಕ್ಕೂ ನಿಯಾಮಕನಾಗಿ ಶುಭಕರನಾಗಿ ಸರ್ವಕಾರಣಗಳಿಗೂ ಕಾರಣನಾಗಿ ಉತ್ತಮಕ್ಕಿಂತಲೂ ಉತ್ತಮನಾಗಿ ದೊಡ್ಡದಕ್ಕಿಂತಲೂ ದೊಡ್ಡವನಾಗಿ ಅಣುವಿಗೂ ಅಣುವಾಗಿ ದೇವತೆಗಳಿಗೂ ದೇವತೆಯಾಗಿ ಶುಭವಾದ ಕಾಂತಿಯುಳ್ಳಂಥಾ

ಮೃತ್ಯುಂಜಯಮುದಾರಾಂಗಂಕಾಲಕೂಟವಿಷಾಶನಂ ।
ಅನಂತರೂಪಮನುವೃಷ ಶಿವಂಪರಮಕಾರಣಂ ॥

ಅತೀತಂಶಾಂತಮಮೃತಂವೇದಾನಾಂಕಾರಣಂಪರಂ |
ಆದಿಮಧ್ಯಾಂತರಹಿತಮೇಕಂತಛ್ಛಬ್ದಬೋಧಿತಂ ||
ಅತ್ಯಂತವಿಭವೋಪೇತಂ ಚಿದಾನಂದಸ್ವರೂಪಿಣಂ |
ಅರೂಪಮದ್ವಯಂನಿತ್ಯಂಶಾಶ್ವತಂಪರಮೇಶ್ವರಂ ||
ಉಮಾಸಹಾಯಂವಿಶ್ವೇಶಂಲೋಚನತ್ರಿತಯೋಜ್ವಲಂ |
ಸಕಲಂಪರಮೇಶಾನಂನೀಲಕಂಠಮುನೀಶ್ವರಂ ||

ಟೀ || ಕಾಲಮೃತ್ಯುವಂ ಜಯಿಸಿದವನಾಗಿ ಉತ್ಕೃಷ್ಟವಾದ ಶರೀರವುಳ್ಳವನಾಗಿ ಕಾಲಕೂಟವಿಷವಂ ಪಾನಮಾಡಿದವನಾಗಿ ನಾಶರಹಿತವಾದ ರೂಪವುಳ್ಳವನಾಗಿ ವ್ಯಕ್ತವಾಗದಿದ್ದರೂ ಸಕಲ ಶುಭಸ್ವರೂಪದಿಂದ ಪ್ರಕಾಶಿಸುತ್ತಾ ಉತ್ಕೃಷ್ಟಗಳೆಲ್ಲಕ್ಕೂ ಕಾರಣನಾಗಿ ಸರ್ವಾತೀತನಾಗಿ ಕಾಮಾದಿ ವಿಕಾರವಿಲ್ಲದ್ದರಿಂದ ಶಾಂತನಾಗಿ ಷಡ್ಭಾವವಿಕಾರಗಳಿಲ್ಲದ್ದರಿಂದ ಅಮೃತನಾಗಿ ವೇದಗಳಿಗೆ ಕಾರಣನಾದ್ದರಿಂದ ಸರ್ವೋತ್ತಮನಾಗಿ ಉತ್ಪತ್ತಿಸ್ಥಿತಿ ನಾಶಗಳಿಲ್ಲದ್ದರಿಂದ ಮುಖ್ಯನೆನಿಸುತ್ತಾ ತಛ್ಛಬ್ದದಿಂದ ಬೋಧಿಸಲ್ಪಟ್ಟವನಾಗಿ ಕೊನೆಯಿಲ್ಲದ ವಿಭವದಿಂದ ಕೂಡಿ ಜ್ಞಾನಾನಂದರೂಪನಾದ್ದರಿಂದ ರೂಪ ರಹಿತನಾಗಿ ದ್ವಂದ್ವ ವಿಕಾರವಿಲ್ಲದೆ ತ್ರಿಕಾಲಗಳಲ್ಲೂ ಶಾಶ್ವತನಾಗಿ ಈಶ್ವರರಿಗೆ ಈಶ್ವರನಾಗಿ ಪಾರ್ವತಿಗೆ ಸಹಾಯನಾಗಿ ಪ್ರಪಂಚಗಳಿಗೆ ಈಶ್ವರನಾಗಿ ಮೂರು ಕಣ್ಣುಗಳಿಂದ ಪ್ರಕಾಶಿಸುತ್ತಾ ಸಮಸ್ತ ಕಲಾಸಹಿತನಾಗಿ ಪರಶಕ್ತಿಗೆ ನಾಯಕನಾಗಿ ಕಂಠದಲ್ಲಿ ಕಪ್ಪುಳ್ಳವನಾಗಿ ಮತ್ತೊಬ್ಬ ಈಶ್ವರನಿಲ್ಲದಂಥಾ

ಮುನಿರ್ಗಚ್ಛತಿತಂಧ್ಯಾತ್ವಾ ಪಂಚಭೂತೈಕಕಾರಣಂ |
ಸುಷುಪ್ತಿಸಾಕ್ಷಿಂಸರ್ವಸ್ಮಾತ್ತಮಸಃಪರತಸ್ಥಿತಂ ||
ಸಬ್ರಹ್ಮಾಸಶಿವಃಪ್ರೋಕ್ತಸ್ಸಏವೇಂದ್ರಃಪ್ರಕೀರ್ತಿತಃ |
ಸಏವಾಕ್ಷರಸಂಜ್ಞಶ್ಚಸಏವಪರಮಸ್ಸ್ವರಾಟ್ ||
ಸಏವವಿಷ್ಣುರಿತ್ಯುಕ್ತಸ್ಸಏವಪ್ರಾಣಸಂಜ್ಞಕಃ |
ಕಾಲಸ್ಸಏವಸೋಗ್ನಿಶ್ಚಚಂದ್ರಮಾಶ್ಚಸಕಥ್ಯತೆ ||
ಸಏವಸರ್ವಂಯದ್ಭೂತಂಯಚ್ಚಭವ್ಯಂಸನಾತನಂ |
ಧ್ಯಾತ್ವಾತಂಮೃತ್ಯುಮತ್ಯೇತಿನಾನ್ಯಃಪಂಥಾವಿಮುಕ್ತಯೆ ||

ಟೀ || ಆ ಪರಶಿವನಂ ಮುನಿಯು ಧ್ಯಾನಿಸಿ ಪಂಚಭೂತಗಳಿಗೆ ಮುಖ್ಯಕಾರಣನಾಗಿ ಸುಷುಪ್ತಿಗೆ ಸಾಕ್ಷಿಯಾಗಿ ಸಮಸ್ತವಾದ ತಮಸ್ಸಿಗೂ ದೂರದಲ್ಲಿರುವ ಆ ಪರಮೇಶ್ವರನನ್ನೇ ಪೊಂದುವನು. ಧ್ಯಾನಸಮಯದಲ್ಲಿ ಹೃದಯರಂಧ್ರದಲ್ಲಾವದು ಧ್ಯಾನದೃಷ್ಟಿಗೆ ಗೋಚರವಾಗುವದೋ ಅದೇ ಬ್ರಹ್ಮವು, ಅದೇ ಶಿವನು, ಅದೇ ಇಂದ್ರನು, ಅದೇ ನಾಶವಿಲ್ಲದ ಬ್ರಹ್ಮವು. ಇದೇ ವಸ್ತುವು ವಿರಾಟ್ಸ್ವರಾಡ್ವಿಷ್ಣು ಮುಖ್ಯಪ್ರಾಣ ಕಾಲಪುರುಷವಹ್ನಿ ಚಂದ್ರಾದಿತ್ಯ ಮೊದಲಾದ ದೇವಸಮೂಹವು. ಹಿಂದಕ್ಕೆ ಹೋದದ್ದು ಮುಂದಕ್ಕೆ ಆಗುವದು ಈಗ ಇರುವುದು ಇವೆಲ್ಲವೂ ಆ ಸನಾತನ ವಸ್ತುವೇ ಆಗಿವೆ. ಈ ವಸ್ತುವನ್ನು ಧ್ಯಾನಿಸಿದವನು ಮೃತ್ಯುವನ್ನತಿಕ್ರಮಿಸುವನು. ಇದಲ್ಲದೆ ಮುಕ್ತಿಗೆ ಮತ್ತೊಂದು ದಾರಿಯಿಲ್ಲ.

ಆತ್ಮಾನಂಸರ್ವಭೂತಸ್ಥಂಸರ್ವಭೂತಾನಿಚಾತ್ಮನಿ |
ಸಂಪಶ್ಯನ್ಬ್ರಹ್ಮದಿತೊಯೋಗೀಪರಬ್ರಹ್ಮನಿರಾಮಯಂ ||
ವಿಚ್ಛಿದ್ಯಸಕಲಾನ್ಪಾಶಾನ್ಯಾತಿನಾನ್ಯೇನಹೇತುನಾ |
ಸ್ವೀಯಮಾತ್ಮಾನಮರಣಿಂ ಪ್ರಣವಂಚೊತ್ತರಾರಣಿಂ ||
ಕೃತ್ವಾಧ್ಯಾನಾಖ್ಯಮಥನ ದಂಡಂದೇವಮಹಾಮುನೆ |
ಅತ್ಯಂತಮಥನೆನಾಗ್ನಿಂಪ್ರಜ್ವಾಲ್ಯಾನನ್ಯಮಾನಸಃ ||
ಅವಿದ್ಯಾಖ್ಯಮಹಾಪಾಶಂಶಿವಭಕ್ತೋದಹೇತ್ಪುಮಾನ್ |
ಕರ್ಮಣಾಪಾಶವಿಚ್ಛಿತ್ತಿರ್ನಾಸ್ತಿನಾಸ್ತಿಮಹಾಮುನೆ ||

ಟೀ || ವ್ಯಾಪಕಭಾವದಿಂದ ಸಮಸ್ತ ಪ್ರಾಣಿಗಳಲ್ಲಿಯೂ ತಾನಿರುವವನಾಗಿಯೂ ಅಧಿಷ್ಠಾನಭಾವದಿಂದ ಪ್ರಾಣಿಗಳೆಲ್ಲವೂ ತನ್ನಲ್ಲಿರುವವುಗಳಾಗಿಯೂ ನೋಡುತ್ತಾ ನಿತ್ಯಾನಂದನಾಗಿರುವ ಯೋಗಿಯು ಸಮಸ್ತ ಪಾಶಗಳಂಛೇದಿಸಿ ನಿರಾಮಯವಾದ ಪರಬ್ರಹ್ಮನನ್ನು ಪೊಂದುವನಲ್ಲದೆ ಕಾರಣಾಂತರದಿಂದ ಪೊಂದಲಾರನು. ಶಿವಭಕ್ತನು ತನ್ನ ಆತ್ಮನನ್ನು ಪೂರ್ವಾರಣಿಯನ್ನಾಗಿಯೂ ಪ್ರಣವವನ್ನುತ್ತರಾರಣಿಯನ್ನಾಗಿಯೂ ಮಾಡಿಕೊಂಡು ಧ್ಯಾನವೆಂಬ ಕಡೆಗೋಲಿನಿಂದ ಚನ್ನಾಗಿ ಕಡೆಯುತ್ತ ಆ ಕಡತದಲ್ಲಿ ಏಕಾಗ್ರಚಿತ್ತನಾಗಿ ಅದರಿಂಪುಟ್ಟಿದ ಅಜ್ಞಾನವೆಂಬ

ಪಾಪವನ್ನು ದಹಿಸುವನು. ಎಲೈ ಮಹಾಮುನಿಯೇ, ಕರ್ಮದಿಂದ ಪಾಶವಿಚ್ಛಿತ್ತಿಯೆಂದಿಗೂ ಇಲ್ಲವೇ ಇಲ್ಲ.

ಮಾಯಯಾಮೋಹಿತಾತ್ಮಾಸನ್ನಧಿಷ್ಠಾಯಕಳೇಬರಂ |
ಕರೋತಿಸಕಲಂಕಾರ್ಯಂಚೋದಿತಸ್ತೇನಕರ್ಮಣಾ ||
ಕಾಂತಾನ್ನಪಾನಪ್ರಮುಖೈರ್ಭೋಗೈರ್ಜಾಗ್ರತ್ಸುತುಷ್ಯತಿ |
ಅತಸ್ಸ್ವಪ್ನೇಪಿಜೀವೋಯಂ ಭೋಕ್ತಾಚಸುಖದುಃಖಯೋಃ ||
ಸ್ವಮಾಯಾಕಲ್ಪಿತವಿಶ್ವೇವಿಚಿತ್ರೇತೈಜಸಾಭಿಧಃ |
ಸುಷುಪ್ತಿಕಾಲೇಸಕಲೇವಿಲೀನೇಜೀವಏವಹಿ ||
ತಮೋಭಿಭೂತಃಪ್ರಾಜ್ಞಾಖ್ಯೋಪ್ಯೈತ್ಯಯಂಸುಖರೂಪತಾಂ |
ಬಹುಜನ್ಮಾರ್ಜಿತಾನಾಂಹಿಸಂಬಂಧಾತ್ಪೂರ್ವಕರ್ಮಣಾಂ |
ಸಏವಜೀವಸ್ಸ್ವಪಿತಃಪ್ರಬುದ್ಧೋಭವತಿಕ್ಷಣಾತ್ ||

ಟೀ || ಅನಾದಿಯಾದ ಮಾಯೆಯಿಂದ ಮೋಹಿತವಾದ ಬುದ್ಧಿಯುಳ್ಳವನಾದಕಾರಣ ಈ ಜೀವನು ತನ್ನ ಸ್ವರೂಪವನ್ನು ಮರತು ಶರೀರವೇ ತಾನೆಂದು ಪರಿಗ್ರಹಿಸಿ ಸಕಲವಾದ ಕರ್ಮವನ್ನು ಮಾಡುವನು. ಆ ಕರ್ಮದಿಂದ ಪ್ರೇರಿತನಾಗಿ ಜಾಗ್ರದವಸ್ಥೆಯಲ್ಲಿರುವ ಈ ಜೀವನು ಸ್ತ್ರೀ, ಅನ್ನ, ಪಾನ ಮೊದಲಾದ ಭೋಗಗಳಿಂದ ಸಂತುಷ್ಟನಾಗುವನು. ಅದರಿಂದೀಜೀವನು ಸ್ವಮಾಯಾಕಲ್ಪಿತವಾದ ಪ್ರಪಂಚದಲ್ಲಿ ತೈಜಸನೆಂಬ ಪೆಸರುಳ್ಳವನಾಗಿ ಸುಖದುಃಖಗಳನ್ನನುಭವಿಸುವನು. ಸುಷುಪ್ತಿಕಾಲದ ಚಿತ್ತಾದ್ಧಿಕರಣವೆಲ್ಲವೂ ಲಯವನ್ನು ಹೊಂದಲು ತಮೋಗುಣದಿಂದ ತಿರಸ್ಕೃತವಾದ ಬಾಹ್ಯಪ್ರಜ್ಞೆಯುಳ್ಳೀಜೀವನೆ ಪ್ರಾಜ್ಞನೆಂಬ ಪೆಸರುಳ್ಳವನಾಗಿ ಸುಖಸ್ವರೂಪತ್ವವನ್ನು ಪೊಂದುವನು. ಬಹು ಜನ್ಮಾರ್ಜಿತವಾದ ಪೂರ್ವಕರ್ಮಗಳ ಸಂಬಂಧದಿಂದ ಆ ಜೀವನೆ ಮಲಗುವನು; ಕ್ಷಣಮಾತ್ರದಿಂದಲೆ ಯಚ್ಚರವಾಗುವನು.

ಜೀವಃಪುರತ್ರಯೆಯಸ್ತುಕ್ರೀಡತೆಚಿನ್ಮಯಾತ್ಮಕಃ |
ವಿಚಿತ್ರಂಸಕಲಂಜಾತಂಮನೋವಾಚಾಮಗೋಚರಂ ||
ಆಧಾರಂಸರ್ವಲೋಕಾನಾಂಸದಾನಂದೈಕವಿಗ್ರಹಂ |
ಅಖಂಡಬೋಧಂಸರ್ವೇಶಂಪಶ್ಯೆತ್ಸಾಭಿನ್ನರೂಪಿಣಂ ||
ತಸ್ಮಿನ್ನುಪತ್ರಯಂಚೈವವಿಲಯಂಯಾತಿಸರ್ವತಃ |

ಏತಸ್ಮಾಜ್ಜಾಯತೆಪ್ರಾಣೊಮನಸ್ಸರ್ವೇಂದ್ರಿಯಾಣಿಚ ||
ವಿಯದ್ವಾಯುಸ್ತಥಾತೆಜೊಹ್ಯಾಪಸ್ಸರ್ವಾಸ್ತಥೈವಚ |
ಸರ್ವಪ್ರಪಂಚನಿಲಯಾಭೂಮಿರತ್ಯಂತವಿಸ್ಮೃತಾ ||

ಟೀ || ಜಾಗ್ರತ್ಸ್ವಪ್ನ ಸುಷುಪ್ತಿರೂಪವಾದ ಮೂರು ಪುರಗಳಲ್ಲಿ ಯಾವನು ಕ್ರೀಡಿಸುತ್ತಿರುವುನೋ ಅವನೇ ಚಿನ್ಮಾತ್ರಸ್ವರೂಪನಾದ ಪರಶಿವನು. ವಿಚಿತ್ರವಾಗಿ ಮನೋವಾಕ್ಕುಗಳಿಗೆ ಅಗೋಚರವಾದಸ ಕಲಪ್ರಪಂಚವೂ ಈತನಿಂದಲೇ ಪುಟ್ಟಿರುವುದು. ಸಕಲ ಲೋಕಗಳಿಗೂ ಆಧಾರವಾಗಿ ಸತ್ಯವಾದಾನಂದವೇ ಮುಖ್ಯವಾದ ಸ್ವರೂಪವುಳ್ಳದ್ದಾಗಿಯುಂ ಅಖಂಡ ಜ್ಞಾನಸ್ವರೂಪವಾಗಿಯುಂ ಇರುವ ಸರ್ವೇಶ್ವರನನ್ನು ತನಗೆ ಅಭಿನ್ನನನ್ನಾಗಿ ತಿಳಿಯಬೇಕು. ಹೀಗೆ ತಿಳಿದ ಪುರುಷನಲ್ಲಿಯೇ ಈ ಪುರತ್ರಯವು ಸರ್ವಾಂಶದಿಂದಲೂ ಲಯವಂ ಪೊಂದುವದು. ಈ ಪರಮಪುರುಷನತ್ತಣಿಂ ಪ್ರಾಣವೂ ಮನವೂ ಸಮಸ್ತವಾದ ಇಂದ್ರಿಯಗಳು ಸಹ ಪುಟ್ಟುವವು. ಆಕಾಶವೂ, ವಾಯುವೂ, ತೇಜವೂ, ಸಮಸ್ತವಾದ ಉದಕಗಳು, ಸರ್ವಪ್ರಪಂಚಗಳಿಗಾಧಾರವಾದ ಅತಿವಿಸ್ತಾರವಾದ ಭೂಮಿಯು ಸಹ ಪುಟ್ಟುವವು.

ಯದೆತತ್ಪರಮಂಬ್ರಹ್ಮವಿಶ್ವಸ್ಯಾಯತನಂಮಹತ್ |
ಸೂಕ್ಷ್ಮಾತ್ಸೂಕ್ಷ್ಮತರಂನಿತ್ಯಂತದ್ಬ್ರಹ್ಮತ್ವಂತ್ವಮೆವತತ್ ||
ಜಾಗ್ರತ್ಸ್ವಪ್ನಸುಷುಪ್ತ್ಯಾದಿವಿಶ್ವಂಯತ್ರಪ್ರಕಾಶತೆ |
ತದ್ಬ್ರಹ್ಮಾಹಮಿತಿಜ್ಞಾತ್ವಾಸರ್ವಬಂಧೈಃಪ್ರಮುಚ್ಯತೆ ||
ತ್ರಿಷುಧಾಮುಸುಯದ್ಭೊಜ್ಯಂಭೊಕ್ತಾಯಶ್ಚಸನಾತನಃ |
ಭೊಗಾಶ್ಚಸರ್ವವಸ್ತೂನಾಮನ್ನಾದೀನಾಂಮಹಾಮುನೆ ||
ಸಾಕ್ಷೀವಿಲಕ್ಷಣಸ್ತೆಭ್ಯಶ್ಚಿದಾತ್ಮಾಹಂಸದಾಶಿವಃ |
ಏತಚ್ಚಸಕಲಂವಿಶ್ವಂಜಾತಂಮಯ್ಯೆವತತ್ವತಃ |
ಮಯ್ಯೆವಸ್ಥಿತಿಮಾಯಾತಿಮಯಿನಾಶಂಸಮಶ್ನುತೆ ||

ಟೀ || ಯಾವದು ಪರಬ್ರಹ್ಮವೋ ಆ ವಸ್ತುವೇ ಪ್ರಪಂಚಕ್ಕೆ ಸ್ಥಾನವಾಗಿರುವದು. ಆದರಿಂದಲೇ ಮಹತ್ತೆನಿಸುವದು. ತಿಳಿಯಲಶಕ್ಯವಾದ್ದರಿಂ ಸೂಕ್ಷ್ಮಕ್ಕಿಂತಲೂ ಅತಿ ಸೂಕ್ಷ್ಮವೆನಿಸುವದು. ಶಾಶ್ವತವಾದ ಆ ಬ್ರಹ್ಮವೇನೀನು, ನೀನೇ ಆ ಬ್ರಹ್ಮವು, ಜಾಗ್ರತ್ಸ್ವಪ್ನ ಸುಷುಪ್ತಿ ಮೊದ

ಲಾದ ಪ್ರಪಂಚವು ಯಾವುದರಲ್ಲಿ ತೋರುವುದೋ ಆ ಬ್ರಹ್ಮವೇ ನಾನೆಂದು ತಿಳಿದು ಸರ್ವಬಂಧಗಳಿಂ ಬಿಡಲ್ಪಡುವನು. ಜಾಗ್ರದಾದಿಯಾದ ಮೂರು ಸ್ಥಾನಗಳಲ್ಲಿ ಯಾವದು ಭೋಜ್ಯವೊ ಯಾವನು ಸನಾತನ ನೆನಿಸುವ ಭೋಕ್ತೃವೊ ಎಲೈ ಮಹಾಮುನಿಯೇ ಅನ್ನ ಮೊದಲಾದ ಸಮಸ್ತವಸ್ತುಗಳ ಭೋಗಗಳಾವುಗಳೋ ಅವುಗಳಿಗೆ ವಿಲಕ್ಷಣನಾಗಿ ಸಾಕ್ಷಿಯಾಗಿ ಚಿನ್ಮಾತ್ರ ಸ್ವರೂಪನಾದ ಸದಾಶಿವನೇ ನಾನು. ಸಮಸ್ತವಾದ ಈ ಪ್ರಪಂಚವೆಲ್ಲವೂ ಯಥಾರ್ಥವಾಗಿ ನನ್ನಲ್ಲೇ ಪುಟ್ಟಿತು; ನನ್ನಲ್ಲೇ ಸ್ಥಿತಿಯಂಪೊಂದಿರುವದು; ನನ್ನಲ್ಲಿಯೇ ಲಯವಂ ಪೊಂದುವದು.

ಆತೋಹಮದ್ವಯಂಬ್ರಹ್ಮ ಲಕ್ಷಿತಂತತ್ಪದೇನತು |
ತದೇವಾಹಮಿತಿಜ್ಞಾತ್ವಾಸರ್ವಬಂಧೈಃಪ್ರಮುಚ್ಯತೆ ||
ಲೋಕೇಹ್ಯಣುತರಂಯತ್ತು ತತೋಹಮಣುರೇವಹಿ |
ಮಹದ್ಭ್ಯೋ ವಿಯದಾದಿಭ್ಯೋಹ್ಯಹಮೇವಪರೋಮಹಾನ್ ||
ಅಶೇಷಂವಿಶ್ವಮೇತದ್ಧಿ ಚಾಹಮೇವನಸಂಶಯಃ |
ಪುರಾತನೋವಿಶುದ್ಧಶ್ಚ ಪುರುಷೋಹಂಹಿರಣ್ಮಯಃ ||
ಈಶೋಹಂಶಿವರೂಪೋಹ ಮಭಿನ್ನೋಹಂಸದಾಶಿವಾತ್ |
ಪಾಣೀಪಾದೌಚಮೇನಸ್ತೋಹ್ಯಚಿಂತ್ಯೋದ್ಭುತಶಕ್ತಿಮಾನ್ ||

ಟೀ|| ಜಗತ್ತೆಲ್ಲವೂ ನನಿಗೆ ಭಿನ್ನವಾದುದಲ್ಲವಾದಕಾರಣ ಅದ್ವಿತೀಯವಾಗಿ ತತ್ಪದದಿಂ ಲಕ್ಷಿತವಾಗಿರುವ ಬ್ರಹ್ಮವೇ ನಾನು. ಅದೇ ನಾನೆಂದುತಿಳಿದಿರುವನಾವನುಂಟೊ ಅವನು ಸರ್ವಬಂಧಗಳಿಂ ಬಿಡಲ್ಪಡುವನು. ಲೋಕದಲ್ಲಾವದು ಅಣುವೋ ಅದಕ್ಕಿಂತಲೂ ನಾನು ಅಣುವಾಗಿರುವೆನು. ನಾನು ದೊಡ್ಡದಾದ ಆಕಾಶಾದಿಗಳಿಗಿಂತಲೂ ಉತ್ಕೃಷ್ಟವಾಗಿ ದೊಡ್ಡದಾಗಿರುವೆನು. ಸಮಸ್ತವಾದ ಈ ಪ್ರಪಂಚವೆಲ್ಲವೂ ನಾನೆನ್ನುವದರಲ್ಲಿ ಸಂಶಯವಿಲ್ಲವು. ಪುರಾತನನಾಗಿಯೂ ದೋಷರಹಿತನಾಗಿಯೂ ಸುವರ್ಣದಂತೆ ನಿರ್ಮಲನಾಗಿಯೂ ಇರುವ ಪುರುಷನೇ ನಾನು. ಸ್ವಾಧೀನವಾದ ಇಚ್ಛಾಶಕ್ತಿಯುಳ್ಳ ಈಶ್ವರನೇ ನಾನಾಗಿರುವೆನು. ತುರೀಯಚಿನ್ಮಾತ್ರರೂಪನಾದ ಶಿವನು ನಾನು. ನಿತ್ಯಾನಂದನಾದ ಸದಾಶಿವನಿಗಭಿನ್ನನು ನಾನು. ಕೈಕಾಲುಗಳಿಲ್ಲದಿದ್ದರುಂ ಅಚಿಂತ್ಯಾದ್ಭುತ ಶಕ್ತಿಯಾದ್ದರಿಂದಾಯಾಯ ಕಾರ್ಯಗಳಂ ನಡೆಸುವೆನು.

ಅಚಕ್ಷುರೇವಪಶ್ಯಾಮ್ಯಕರ್ಣಹೀನಶ್ರುಣೊಮ್ಯಹಂ |
ವಿವಿಕ್ತದೇಹಸ್ಸಕಲಂಜಾನಾಮ್ಯೇವಚರಾಚರಂ ||
ವೇತ್ತಾ ಮಮನಕೊಪ್ಯಸ್ತಿ ಚಿತ್ಸ್ವರೂಪಸ್ಸದಾಶಿವಃ |
ಅನೇಕೈರ್ವೇದಸಂಘೈಶ್ಚ ವೇದ್ಯೋಹಂತುನಚಾಪರಃ ||
ಅಹಮೇವಹಿವೇದಾಂತಕರ್ತಾವೇದಾಂತವಿನ್ಮುನೇ |
ನಮೇಪುಣ್ಯಂಚಪಾಪಂಚ ಮಮನಾಶೊನವಿದ್ಯತೆ ||
ಮಮಜನ್ಮಶರೀರಂವಾನೆಂದ್ರಿಯಾಣಿಮತಿಸ್ತಥಾ |
ನಮೇಭೂಮಿರ್ನಚಾಪೊಪಿ ತೆಜೊವಾಯುಶ್ಚಮೇನಹಿ ||
ನಚಾಂಬರಂಚದಿಕ್ಕಾಲೊಮನೊಮಮನವಿದ್ಯತೆ |
ಏವಂಗುಹಾಶಯಂಸಾಂಬಂವಿದಿತ್ವಾಪರಮೇಶ್ವರಂ ||
ನಿಷ್ಕಲಂನಿಷ್ಕ್ರಿಯಂಶಾಂತಂಸರ್ವಭೇದವಿವರ್ಜಿತಂ |
ಸಮಸ್ತಸಾಕ್ಷಿಭೂತಂಚವಿಶ್ವಾತೀತಂನಿರಾಮಯಂ |
ಪ್ರಯಾತಿಪರಮೇಶಾನಂಸದಾನಂದೈಕವಿಗ್ರಹಂ ||

ಟೀ|| ನೇತ್ರವಿಲ್ಲಧೆ ನೋಡುವೆನು; ಕಿವಿಯಿಲ್ಲದೆ ಕೇಳುವೆನು; ದೇಹವಿಲ್ಲದೆ ಸಕಲಚರಾಚರಗಳಂತಿಳಿಯುವೆನು. ನನ್ನನ್ನು ತಿಳಿದವನು ಯಾವನೂ ಇಲ್ಲ. ಚಿದ್ರೂಪನಾಗಿ ಸದಾಶಿವನೆನಿಸುತ ಅನೇಕವಾದ ವೇದಸಮೂಹಗಳಿಂ ತಿಳಿಯಲು ಯೋಗ್ಯನಾದವನು ನಾನಲ್ಲದೆ ಮತ್ತೊಬ್ಬನಲ್ಲ. ಎಲೈ ಮುನಿಯೆ, ವೇದಾಂತಗಳನ್ನು ಮಾಡಿದವನೂ ತಿಳಿದವನು ಸಹ ನಾನು. ನನಗೆ ಪುಣ್ಯಪಾಪಗಳೂ ಇಲ್ಲ, ನಾಶವೂ ಇಲ್ಲ. ಉತ್ಪತ್ತಿಯೂ ಶರೀರವೂ ಇಂದ್ರಿಯಗಳೂ ಬುದ್ಧಿಯೂ ಭೂಮಿ ಜಲ ತೆಜೊವಾಯ್ವಾಕಾಶಗಳೂ, ಮನಸ್ಸು ಸಹ ನನಗಿಲ್ಲ. ಈ ರೀತಿಯಾಗಿ ಬುದ್ಧಿಯಲ್ಲಿರುವಂಥಾ ಸಾಂಬನಾದ ಪರಮೇಶ್ವರನಂ ತಿಳಿದು ನಿರಂಶನಾಗಿಯೂ ನಿಷ್ಕ್ರಿಯನಾಗಿಯೂ ಭೇದವಿಕಾರವಾವದೂ ಇಲ್ಲದ್ದರಿಂದ ಶಾಂತನಾಗಿಯೂ ಸರ್ವಾತೀತನಾಗಿಯೂ ಸಾಕ್ಷಿಭಾವದಿಂದಿರುತ್ತಾ ಯಾವ ವ್ಯಥೆಯೂ ಇಲ್ಲದೆ ನಿತ್ಯಾನಂದವೇ ಮುಖ್ಯ ಸ್ವರೂಪನಾಗಿರುವ ಪರಮೇಶ್ವರನಂ ಪೊಂದುವನು.

ಏತದ್ವಿದ್ಯಾಭಿಗಮನೆ ಕಾರಣೆಶತರುದ್ರಿಯಂ |
ಯೊಧೀತೆಶತರುದ್ರೀಯಂಸೊಗ್ನಿಪೂತೊಭವೇತ್ಪುಮಾನ್ ||
ಸುರಾಪಾನೊದಿತಾತಾ ಪಾದ್ರ್ರಹ್ಮಹತ್ಯಾದಿತಾದಪಿ |

ಗುರುತಲ್ಪೋಪಗಮನಾತ್ಪೂತೋಭವತಿಮಾನವಃ ||
ತಸ್ಮಾದ್ವಿಭೂತಿಸಂಪನ್ನೋಭಸ್ಮಶಯ್ಯಾಮುಪೆಯಿವಾನ್ |
ಶ್ರೀಮತ್ಪಂಚಾಕ್ಷರೀಮಂತ್ರಂಪ್ರಣವೇನಷಡಕ್ಷರಂ ||
ಧ್ಯಾಯನ್ಮನೋಮಹಾಮಂತ್ರಂಶಿವಲಿಂಗಾರ್ಚನೆರತಃ |
ಮೋಕ್ಷಶ್ರಿಯಮವಾಪ್ನೋತಿನಾತ್ರಕಾರ್ಯಾವಿಚಾರಣಾ ||

ಟೀ || ಈ ಬ್ರಹ್ಮಜ್ಞಾನ ಬರುವದಕ್ಕೆ ಶತರುದ್ರಿಯವೆ ಕಾರಣವು. ಯಾವನು ಇದನ್ನು ಅಧ್ಯಯನವಂ ಮಾಡುವನೋ ಅವನು ಸುರಾಪಾನ ಬ್ರಹ್ಮಹತ್ಯಾ ಗುರುಪತ್ನೀಗಮನಾದಿದೋಷಗಳಿಂದ ಮುಕ್ತನಾಗುವನು. ಆದರಿಂದ ವಿಭೂತಿರುದ್ರಾಕ್ಷಧಾರಿಯಾಗಿ ಭಸ್ಮದಲ್ಲಿ ಶಯನವಂ ಮಾಡುತ್ತಾ ಪ್ರಣವದೊಡನೆ ಷಡಕ್ಷರವಾಗಿರುವ ರುದ್ರದಲ್ಲಿ ಮುಖ್ಯವಾಗಿರುವ ಪಂಚಾಕ್ಷರೀಮಂತ್ರವಂ ಜಪಿಸಬೇಕು. ಈ ಮಹಾಮಂತ್ರವನ್ನು ಜಪಿಸುತ್ತಾ ಶಿವಲಿಂಗಾರ್ಚನೆಯಲ್ಲಾಸಕ್ತನಾದವನು ಮೋಕ್ಷಸಾಮ್ರಾಜ್ಯವಂ ಪೊಂದುವನು. ಈ ವಿಷಯದಲ್ಲಿ ವಿಚಾರವಂಮಾಡಲಾಗದು.

ಅತಃಕರ್ಮಪರಿತ್ಯಾಗಾನ್ಮೋಕ್ಷಮಾಪ್ನೋತಿತತ್ವತಃ |
ದ್ವಿಜಾನಾಮಿತಿಬಾಲೋಯಂಬಸವೆಶೋಬ್ರವೀನ್ಮುನೆ ||
ಇತಿಬಸವಕುಮಾರಸ್ಯಾನನೋದ್ಗೀಯಮಾನಂ |
ಶ್ರವಣಕಟುತದಾನೀಂಬ್ರಾಹ್ಮಣಾನಾಮದೋಷಂ ||
ಸವನಸದಸಿವಿದ್ವದ್ಗೀಯಮಾನಂಹಿಸಾಮಾ |
ಮರವರನುತಿಯೋಗ್ಯಂ ರಾಕ್ಷಸಾನಾಮಿವಾಸೀತ್ ||

ಇತಿ ಶ್ರೀಬಸವೇಶ್ವರಪುರಾಣೆ ಸ್ವರೂಪಗ್ರಂಥೆ ಷಷ್ಠೋಧ್ಯಾಯಃ

ಟೀ || ಆದರಿಂದ ಯಥಾರ್ಥವಾಗಿ ಕರ್ಮತ್ಯಾಗದಿಂದಲೇ ಮೋಕ್ಷವಂ ಪೊಂದುವನು ಎಂದು ಬ್ರಾಹ್ಮಣರಂ ಕುರಿತು ಬಾಲಕನಾದೀ ಬಸವೇಶ್ವರನು ಪೇಳಿದನು. ಈ ಪ್ರಕಾರ ಬಸವ ಕುಮಾರನ ಮುಖದಿಂದಾಗ ಪೇಳಲ್ಪಟ್ಟ ವಚನವು ನಿರ್ದೋಷಮಾದರುಂ ಯಜ್ಞದ ಸಭೆಯಲ್ಲಿ ವಿದ್ವಾಂಸರಿಂ ಗಾನಮಾಡಲ್ಪಡುವ ದೇವಶ್ರೇಷ್ಠರ ಸ್ತುತಿಗೆ ಯೋಗ್ಯವಾದ ಸಾಮವೇದವು ರಾಕ್ಷಸರಿಗಾಗುವವೋಲ್ಕರ್ಮಾಸಕ್ತರಾದ ಬ್ರಾಹ್ಮಣರಿಗೆ ಕರ್ಣಕಠೋರವಾದುದೆಂದು ಕುಮಾರಸ್ವಾಮಿಯು ಅಗಸ್ತ್ಯಮುನಿಗೆ

ಪೇಳಿದನೆಂಬಲ್ಲಿಗೆ ಬಸವಪುರಾಣದೊಳ್ಪ್ನಿರೂಪಣದಲ್ಲಾರನೆ ಅಧ್ಯಾಯವು ಪರಿಸಮಾಪ್ತವಾದುದು.

---

ಅಥ ಕರ್ಮನಿರಸನಪ್ರತಿಪಾದಕಃ ಸಪ್ತಮೋಧ್ಯಾಯಪ್ರಾರಂಭಃ.

---

ಅಗಸ್ತ್ಯಃ

ಏವಂಶ್ರೀಬಸವೇಶೇನಪ್ರೋಕ್ತಂವಾಕ್ಯಂಮಹತ್ತರಂ ।
ತದಾಕರ್ಣ್ಯಸಭಾಮಧ್ಯೇ ಕಿಮಕುರ್ವಂತತೆದ್ವಿಜಾಃ ॥
ಏತತ್ಸರ್ವಂಮಹಾಭಾಗವಿಸ್ತರೇಣಷಡಾನನ ।
ಸರ್ವಜ್ಞಸ್ತ್ವಂಮಮಾಖ್ಯಾಹಿ ಕೃಪಾಚೇನ್ಮಯಿಸಾಂಪ್ರತಂ ॥

ಸ್ಕಂದಃ

ಶ್ರುತ್ವೈತದ್ಬ್ರಾಹ್ಮಣಾಸ್ಸರ್ವೇಬಸವೇಶ್ವರಭಾಷಿತಂ ।
ಪುನಃಪ್ರೋಚುರ್ದುರಾತ್ಮಾನಸ್ಸಂಶಯಾವಿಷ್ಟಮಾನಸಾಃ ॥
ಬಸವೇಶಮಹಾಭಾಗಸರ್ವಶಾಸ್ತ್ರಾರ್ಥಪಾರಗ ।
ಅನಾದಿಕಾಲಮಾರಭ್ಯವರ್ತತೇವಿಶ್ವಮೀದೃಶಂ ॥

ಟೀ ॥ ಆಬಳಿಕಾಗಸ್ತ್ಯಮುನಿಯು ಎಲೈ ಕುಮಾರಸ್ವಾಮಿಯೇ ಸಭಾಮಧ್ಯದಲ್ಲೀಪ್ರಕಾರವಾಗಿ ಬಸವೇಶ್ವರನಿಂ ಪೇಳಲ್ಪಟ್ಟ ಮಹತ್ತರವಾದಾಮಾತಂ ಕೇಳಿ ಕರ್ಮಠರಾದ ಬ್ರಾಹ್ಮಣರೇನು ಮಾಡಿದರು ? ಎಲೈ ಮಹಾಭಾಗನೆ ಇದೆಲ್ಲವನ್ನೂ ಸರ್ವಜ್ಞನಾದ ನೀನು ನನ್ನಮೇಲೆ ದಯವಿದ್ದರೆ ವಿಸ್ತಾರವಾಗೀಗ ಪೇಳುವನಾಗು ಎಂದಗಸ್ತ್ಯನು ಪ್ರಶ್ನೆಗೈಯ್ಯುವಲ್ಲಿ ಕುಮಾರಸ್ವಾಮಿಯಿಂತೆಂದನು—ಎಲೈ ಮುನಿಯೆ, ಬಸವೇಶ್ವರನಿಂ ಪೇಳಲ್ಪಟ್ಟೀವಚನವಂ ಬ್ರಾಹ್ಮಣರೆಲ್ಲರೂ ಕೇಳಿ ಕರ್ಮಶ್ರದ್ಧೆಯಿಂದ ದುಷ್ಟರಾಗಿರುವ ಕಾರಣ ಸಂಶಯಪಟ್ಟ ಮನವುಳ್ಳವರಾಗಿ ಮರಳಿ ಪೇಳಿದರು. ಸಕಲಶಾಸ್ತ್ರಾರ್ಥಪಾರಂಗತನಾದ ಮಹತ್ತರ ಭಾಗ್ಯಶಾಲಿಯಾದ ಬಸವೇಶ್ವರನೇ, ಅನಾದಿಕಾಲದಿಂದೀಪ್ರಪಂಚವೀರೀತಿಯಿಂದಲೇ ಇರುತ್ತಿರುವುದು.

ತತ್ರಜಾತಾಮಹಾತ್ಮಾನೋ ವ್ಯಾಸಾದ್ಯಾಶ್ಚಮಹರ್ಷಯಃ ।
ಕಿಮೇತತ್ಕಿಂನಜಾನಂತಿಯುಷ್ಮಯಾಪರಿಭಾಷಿತಂ ॥

ವೈದಿಕಾನಿತುವಾಕ್ಯಾನಿಸಮಸ್ತಾನಿಮಹಾಮುನೇ |
ಭವದುಕ್ತವಿರುದ್ಧಾರ್ಥಂವದಂತಿಬಸವೇಶ್ವರ ||
ಅಷ್ಟವರ್ಷಂಮಹಾಭಾಗಬ್ರಾಹ್ಮಣಸ್ತನಯಂಪರಂ |
ಪಿತಾಚೋಪನಯಿತ್ವೈನಂತತಶ್ಚಾಧ್ಯಾಪಯೇತವೈ ||
ಏವಮೇವಶ್ರುತಿಃಪ್ರಾಹನಾನ್ಯಥಾಬಸವೇಶ್ವರ |
ಜಾತಕರ್ಮಮುಖೇಷ್ವೇಷುಕರ್ಮಸುಬ್ರಾಹ್ಮಣಸ್ಯಹಿ ||
ಕರ್ಮೋಪನಯನಂಶ್ರೇಷ್ಠಂತತ್ತ್ಯಾಗಾತ್ಪತಿತೋಭವೇತ್ |
ಕೃತೋಪನಯನಃಪೂತೋಬ್ರಹ್ಮಚರ್ಯಂಚರೇದ್ವ್ರತೀ ||
ಅಧೀತವೇದವೇದಾಂಗ ಸ್ಸರ್ವಶಾಸ್ತ್ರಾರ್ಥಪಾರಗಃ |
ಅನುಜ್ಞಾತಸ್ತುಗುರುಣಾಲಭೇದ್ಗಾರ್ಹಸ್ಥ್ಯಮುತ್ತಮಂ |
ಗಾರ್ಹಸ್ಥ್ಯಾಚ್ಚವನೀಭೂತ್ವಾವಾನಪ್ರಸ್ಥಸ್ತುಸನ್ಯಸೇತ್ ||

ಟೀ || ಪ್ರಪಂಚದಲ್ಲಿ ಮಹಾತ್ಮರಾದ ವ್ಯಾಸಾದ್ಯನೇಕ ಮಹರ್ಷಿಗಳು ಪುಟ್ಟಿರುವರು. ನಿನ್ನಿಂದಾವದು ಪೇಳಲ್ಪಟ್ಟಿತೋ ಅದನ್ನವರು ಅರಿಯರೇ ? ಎಲೈ ಮಹಾಮುನಿಯೆ ವೈದಿಕವಾದ ನಿನ್ನ ಸಮಸ್ತ ಮಾತಿಗೆ ವಿರುದ್ಧವಾದ ಅರ್ಥವನ್ನೇ ಪೇಳುವರು. ಎಲೈ ಭಾಗ್ಯಶಾಲಿಯೆ ಬ್ರಾಹ್ಮಣನಾದ ತಂದೆಯು ಎಂಟು ವರ್ಷದವನಾಗಿರುವ ಉತ್ತಮನಾದ ಮಗನಿಗೆ ಉಪನಯನವಂ ಮಾಡಬೇಕು; ಬಳಿಕ ಅಧ್ಯಯನವಂಮಾಡಿಸಬೇಕು. ಎಲೈ ಬಸವೇಶ್ವರನೆ ಶ್ರುತಿಯು ಹೀಗೆ ಪೇಳಿರುವದಲ್ಲದೆ ಪ್ರಕಾರಾಂತರದಿಂ ಪೇಳಲಿಲ್ಲ. ಜಾತಕರ್ಮಾದಿಕರ್ಮಗಳಲ್ಲಿ ಬ್ರಾಹ್ಮಣನಿಗೆ ಉಪನಯನವೇ ಶ್ರೇಷ್ಠವೆನಿಸುವದು. ಅದಂ ಬಿಡುವದ್ದರಿಂದ ಪತಿತನಾಗುವನು. ಉಪನೀತನಾಗಿ ಪವಿತ್ರನಾದವನು ವ್ರತಧಾರಿಯಾಗಿ ಬ್ರಹ್ಮಚರ್ಯವಂ ಮಾಡಬೇಕು. ವೇದವೇದಾಂಗಶಾಸ್ತ್ರಾಧ್ಯಯನವಂಮಾಡಿದ ಬಳಿಕ ಗುರುವಿನ ಅನುಜ್ಞೆಯಂ ಪಡೆದು ಗ್ರಹಸ್ಥಾಶ್ರಮವಂಪೊಂದಬೇಕು. ಬಳಿಕ ವಾನಪ್ರಸ್ಥಾಶ್ರಮವನ್ನೂ ಆ ಬಳಿಕ ಸನ್ಯಾಸವನ್ನೂ ಹೊಂದಬೇಕು.

ಇತ್ಯೇತದ್ವಚನಂಶ್ರುತ್ವಾಬ್ರಾಹ್ಮಣಾನಾಂಸಭಾಂತರೇ |
ಪ್ರಾಹಗಂಭೀರಯಾವಾಚಾ ಪ್ರಹಸನ್ಬಸವೇಶ್ವರಃ ||
ಸನ್ಯಾಸಾಶ್ರಯಣಾದೇತತ್ಕರ್ಮತ್ಯಾಗೋಪರೋಮತಃ |
ಸನ್ಯಾಸಾಶ್ರಯಣಾನ್ನರ..ಸ್..ವಕೀರ್ಣೀಪತತ್..ಧಃ ||

ತ್ರಿವಿಧಂವೈದಿಕಂಕರ್ಮಚೋದನಾಲಕ್ಷಣಂಪರಂ |
ನಿತ್ಯಂನೈಮಿತ್ತಿಕಂಕಾಮ್ಯಂಕರ್ಮತತ್ತತ್ಫಲಾಶ್ರಯಂ ||
ಪಶ್ವಾದಿಕಾಮನಾಂಯತ್ತದಧಿಕೃತ್ಯಪ್ರವರ್ತತೆ |
ಸ್ವರ್ಗಕಾಮೊಯಜೆತೆತಿವಾಕ್ಯಪ್ರಾಪ್ತಾನಿಯಾನಿವೈ ||
ಉದ್ಭಿದಾದೀನಿಕರ್ಮಾಣಿಕಾಮ್ಯಾನಿಕಥಿತಾನಿವೈ |
ತಾನಿವೈ ತಾನಿಕರ್ಮಾಣಿ ಪ್ರೋಚ್ಯಂತೆವೆದವಿತ್ತಮೈಃ ||

ಟೀ || ಈ ರೀತಿಯಾದ ಬ್ರಾಹ್ಮಣರ ವಚನವಂ ಕೇಳಿ ನಗುವ ಬಸವೇಶ್ವರನು ಸಭಾಮಧ್ಯದಲ್ಲಿ ಗಂಭೀರವಾದ ವಾಕ್ಕಿನಿಂದ ಪೇಳಿದನ ದೆಂತೆನೆ—ಸನ್ಯಾಸವಂಪಡೆಯುವದಕ್ಕಿಂತೀ ಕರ್ಮತ್ಯಾಗಮಾರ್ಗವು ಬಹು ವಾಗಿ ಪೂಜಿತವಾಗಿರುವದು. ಸನ್ಯಾಸವವಂಮಾಡುವವನು ವ್ರತಭ್ರಷ್ಟ ನಾಗುವನು. "ತ್ರಿವಿಧಂವೈದಿಕಂಕರ್ಮಚೊದನಾಲಕ್ಷಣಂಪರಂನಿತ್ಯಂನೈಮಿತ್ತಿಕಂಕಾಮ್ಯಂ ಕರ್ಮತತ್ತತ್ಫಲಾಶ್ರಯಂ" ಸ್ವರ್ಗಕಾಮಿಯು ಯಾಗವಂ ಮಾಡಬೇಕೆಂಬಂತೆ ಪಶ್ವಾದಿಕಾಮನೆಯಂಪಿಡಿದು ಯಾವದು ಪ್ರವರ್ತಿಸಿರುವದೊ ಅದು ಉದ್ಭಿಜಸಂಬಂಧಿಯಾದ್ದರಿಂದುದ್ಭಿಜವೆನಿಸುವದು. ಇಂಥಾ ಕರ್ಮಗಳು ಕಾಮ್ಯವೆಂದು ವೇದಜ್ಞರು ಪೇಳುವರು. ಗ್ರಹಣದಲ್ಲಿ ಸ್ನಾನವಂ ಮಾಡಬೇಕೆಂಬಂತೆ ನಿಮಿತ್ತವಂಪಿಡಿದು ನಡೆಯುವ ಕರ್ಮಗಳು ನೈಮಿತ್ತಿಕವೆನಿಸುವವು. ಬದುಕಿರುವ ಪರ್ಯಂತ ಅಗ್ನಿಹೋತ್ರವಂಮಾಡಬೇಕೆಂಬಂತೆ ನಿತ್ಯಕರ್ಮವಿಧಾಯಕವಾದ ವಾಕ್ಯದಿಂ ನಡೆಯುವ ಕರ್ಮಗಳು ನಿತ್ಯವೆನಿಸುವವು.

ಉಪರಾಗೆನರಸ್ನಾಯಾದಿತಿನೈಮಿತ್ತಿಕಂಸ್ಮೃತಂ |
ಯಾವಜ್ಜೀವಮಗ್ನಿಹೊತ್ರಂಜುಹೊತೀತಿವಚಃಪರಂ ||
ತದೆತತ್ಕರ್ಮನಿತ್ಯಂಸ್ಯಾದ್ಯಾವಜ್ಜೀವಪದಶ್ರುತೆಃ |
ತಥೈವಾಹರಹಸ್ಸಂಧ್ಯಾಮುಪಾಸೀತೆತಿವಾಕ್ಯಜಂ ||
ತದೆತನ್ನಿತ್ಯಮಿತ್ಯಾಹುರ್ಮೀಮಾಂಸಾನ್ಯಾಯಕೋವಿದಾಃ |
ಯಾವಜ್ಜೀವಪದಂಲಿಪ್ಸಾ ಕರ್ಮನಿತ್ಯತ್ವಬೋಧಕಂ ||
ಯಾವಜ್ಜೀವಮಿದಂಕರ್ಮ ಕರೋಮೀತಿಸಭಾಂತರೆ |
ಸಂಕಲ್ಪ್ಯಕರ್ಮಕರ್ತಾಯಸ್ಸತ್ಯವಸ್ಸ್ವಸ್ಯಜೀವನೆ ||
ಪ್ರವೃತ್ತಿದ್ದಿಶತಾ [illegible] |

ವಿಧ್ಯುಕ್ತಕರ್ಮಣಸ್ತ್ಯಾಗೋವಿಧಿನೈವಕೃತೋಯದಿ ||
ಕರಿಷ್ಯತಿನಪಾತಿತ್ಯಮಿತಿಚೇತ್ತದಸಾಂಪ್ರತಂ ||

ಟೀ || ಯಾವಜ್ಜೀವಪದವು ಕರ್ಮಕ್ಕೆ ನಿತ್ಯತ್ವ ಬೋಧಕವೆಂದು ಮೀಮಾಂಸಾ ಶಾಸ್ತ್ರಜ್ಞರು ಪೇಳುವರು. ಬದುಕಿರುವವರಿಗೆ ಈ ಕರ್ಮವಂ ಮಾಡುವೆನೆಂದು ಸಭಾಮಧ್ಯದಲ್ಲಿ ಸಂಕಲ್ಪವಂಮಾಡಿ ಅಗ್ನಿಹೋತ್ರ ಮೊದಲಾದ ಆಕರ್ಮವಂಮಾಡುತ್ತಿದ್ದು ಸನ್ಯಾಸವಂಮಾಡಿದವನಾದರೆ ಬದುಕಿರುವತನಕ ಮಾಡುವೆನೆಂಬ ಪ್ರತಿಜ್ಞೆಗೆ ಭಂಗಬರುವುದರಿಂದ ವ್ರತ ಭ್ರಷ್ಟನಾಗುವನು. ವಿಧಿವಿಹಿತವಾದ ಕರ್ಮಕ್ಕೆ. ವಿಧಿಯಿಂದಲೇ ತ್ಯಾಗವಾದರೆ ಪಾತಿತ್ಯವಿಲ್ಲವೆನ್ನುವದು ಯುಕ್ತವಾದದ್ದಲ್ಲ.

ಅತಿರಾತ್ರಾಖ್ಯಸವನೆ ಷೋಡಶಗ್ರಹಣಗ್ರಹೆ |
ಆಮ್ನಾಯವಾಕ್ಯವಿಹಿತಂತತ್ರ್ಯಕ್ತನ್ಯಾಯವರ್ತನಂ ||
ಅಂಗೀಕೃತ್ಯಪುರಾಕರ್ಮತತ್ಯಜೆದ್ಯದಿಮಧ್ಯತಃ |
ಅವಕೀರ್ಣೀಸವಿಜ್ಞೆಯಸ್ಸರ್ವಶಿಷ್ಟೈಕದೋಷಿತಃ ||
ಅಂಗೀಕೃತ್ಯಪರಿತ್ಯಾಗಾದನಂಗೀಕರಣಂವರಂ ||

ಟೀ || ಹದಿನಾರು ಪಶುಗಳ ಗ್ರಹಣವುಳ್ಳ ಅತಿರಾತ್ರವೆಂಬ ಯಜ್ಞದಲ್ಲಿ ಈ ನ್ಯಾಯದ ರೀತಿಯು ವೇದವಾಕ್ಯದಿಂದಲೆ ಪೇಳಲ್ಪಟ್ಟಿರುವದು. ಮೊದಲು ಕರ್ಮವನ್ನಂಗೀಕರಿಸಿ ಮಧ್ಯದಲ್ಲದನ್ನು ಬಿಟ್ಟರೆ ಅವನು ವ್ರತಭ್ರಷ್ಟನಾಗಿ ಶಿಷ್ಟಜನರಿಂದ ದೂಷಿತನಾಗುವನು. ಆದ್ದರಿಂದ ಅಂಗೀಕರಿಸದಿರುವದೇ ಉತ್ತಮವು.

ಏತದಾಲೋಕ್ಯಮುನಯೊವ್ಯಾಸಾದ್ಯಾಶ್ಚಮಹತ್ತರಾಃ |
ಮೌಂಜೀವ್ರತಂಪರಿತ್ಯಜ್ಯಮುನಿತ್ವಂಪ್ರತಿಪೆದಿರೆ ||
ವ್ಯಾಸಸ್ಯಜನನಾದೂರ್ಧ್ವಂಕೆನೊಪನಯನಂಕೃತಂ |
ವ್ಯಾಸಜನ್ಮಪ್ರವಕ್ಷ್ಯಾಮಿಶ್ರುಣುಧ್ವಂಬ್ರಾಹ್ಮಣಾಧಮಾಃ ||
ವಸಿಷ್ಠಸ್ಯಸುತಃಪೂರ್ವಂಶಕ್ತಿರ್ನಾಮಬಭೂವಹಿ |
ತಸ್ಯಾಸೀತ್ತನಯಶ್ರೀಮಾನ್ಪರಾಶರಇತಿಸ್ಮೃತಃ ||
ತತ್ರಾಸೀದ್ಧೀವರಸುತಾನೌತಾರಣಪರಾಯಣಾ |
ಪದ್ಮಪತ್ರವಿಶಾಲಾಕ್ಷೀಕಾಂಚನಾಂಗೀಮನೋಹರಾ ||
ಕುಚಾತಿಭಾರವಿನಮನ್ಮಧ್ಯದೇಶೋಪಶೋಭಿತಾ ||

ಟೀ || ಮಹಾತ್ಮರಾದ ವ್ಯಾಸಾದಿಗಳಾದ ಮುನಿಗಳು ಇದಂ ನೋಡಿ ಮೌಂಜೀವ್ರತವಂಬಿಟ್ಟು ಮುನಿಭಾವವಂಪಡೆದರು. ಎಲಾ ನೀಚ ರಾದ ಬ್ರಾಹ್ಮಣರಿರಾ, ವ್ಯಾಸನು ಪುಟ್ಟಿದಮೇಲೆ ಅವನಿಗೆ ಯಾವನಿಂದುಪ ನಯನವು ಮಾಡಲ್ಪಟ್ಟಿತು ? ವ್ಯಾಸನ ಉತ್ಪತ್ತಿಯಂ ಕೇಳುವವರಾಗಿರಿ. ಪೂರ್ವದಲ್ಲಿ ವಸಿಷ್ಠನಿಗೆ ಶಚಿ ಎಂಬ ಮಗನಾದನು. ಅವನಿಗೆ ಪೂಜ್ಯನಾದ ಪರಾಶರನೆಂಬ ಮಗನಾದನು. ಅವನೊಂದುವೇಳೆ ಭೂಮಿಯಲ್ಲಿ ಸಂಚರಿ ಸುತ್ತಾ ಗಂಗಾತೀರಕ್ಕೆ ಬಂದನು. ಅಲ್ಲಿ ಕಮಲದಳದಂತೆ ವಿಶಾಲವಾದ ನೇತ್ರಗಳುಳ್ಳ ಸ್ವರ್ಣಸಮಾನವಾದ ದೇಹವುಳ್ಳವನಾಗಿ ಸ್ತನಭಾರದಿಂದ ಬಾಗುತ್ತಿರುವ ನಡುವಿನಿಂದ ಮನೋಹರಳಾದ ಅಂಬಿಗನ ಮಗಳು ನಾವೆಯಂದಾಟಿಸುತ್ತಿದ್ದಳು.

ಏಕಾಂತಸಂಸ್ಥಿತಾಂಬಾಲಾಂನಿರೀಕ್ಷ್ಯಮುನಿಸತ್ತಮಃ |
ಕಂದರ್ಪಬಾಣಸಂಭಿನ್ನಹೃದಯೋಭೂತ್ಪರಾಶರಃ ||
ಮುಹೂರ್ತಮಾತ್ರಂಸಂಚಿಂತ್ಯತಾಮುವಾಚಮುನೀಶ್ವರಃ |
ತ್ವಯಾಹಂರಂತುಮಿಚ್ಛಾಮಿದ್ವೀಪೆಸ್ಮಿನ್ವರವರ್ಣಿನಿ ||
ಇತ್ಯುಕ್ತಾ ಮುನಿನಾಬಾಲಾಹ್ರಿಯಾನತಮುಖೀತದಾ |
ಪರಾಶರಂಮುನಿಶ್ರೇಷ್ಠಂಪ್ರತ್ಯುವಾಚಾಂಬುಜೇಕ್ಷಣಾ ||
ಕೈವರ್ತತನಯಾಚಾಹಂಕನ್ಯಾದುರ್ಗಂಧಸಂಕುಲಾ |
ದಿವಾಭೋಗೋಹ್ಯಸೌದೋಷಃಪಥಿಕಾಶ್ಚಸಹಸ್ರಶಃ ||
ಆಗಮಿಷ್ಯಂತಿಮಾರ್ಗೇಣನರಹಸ್ಯಂಮುನೀಶ್ವರ |
ಯಥಾವಾವರ್ತತೇಚಿತ್ತಂಭವತೋಹಿತಥಾಕುರು ||

ಟೀ || ರಹಸ್ಯದಲ್ಲಿರುವ ಆ ಹುಡಿಗಿಯಂ ನೋಡಿ ಮುನಿಶ್ರೇಷ್ಠ ನಾದ ಪರಾಶರನು ಕಾಮಪೀಡಿತನಾದನು. ಮುಹೂರ್ತಮಾತ್ರವಾಲೋ ಚಿಸಿ ಎಲೇ ವರವರ್ಣಿನಿಯೆ, ನಿನ್ನೊಡನೆ ಈ ದ್ವೀಪದಲ್ಲಿ ಕ್ರೀಡಿಸಲಿಚ್ಛೈ ಸುವೆನೆಂದು ಹುಡಿಗಿಯಂ ಕುರಿತು ನುಡಿದನು. ಹೀಗೆ ಪೇಳಲ್ಪಟ್ಟಾಬಾ ಲೆಯು ಲಜ್ಜೆಯಿಂ ಬಾಗಿದತಲೆಯುಳ್ಳವಳಾಗಿ ಪ್ರತ್ಯುತ್ತರವಂ ಪೇಳಿದಳು. ಮುನೀಶ್ವರನೇ ನಾನು ಅಂಬಿಗನಮಗಳು, ಕನ್ಯೆಯು ಮತ್ತು ದುರ್ಗಂ ಧವಾದ ಮೈಯ್ಯುಳ್ಳವಳು. ಇದರ ಮೇಲೆ ಈಗ ಹಗಲು. ಹಗಲಿನಲ್ಲಿ

ಭೋಗಿಸುವುದು ಉಚಿತವಲ್ಲವು. ಅಸಂಖ್ಯಾಕವಾಗಿ ಮಾರ್ಗಸ್ಥರು ಬರುವರು; ರಹಸ್ಯಸ್ಥಲವಿಲ್ಲ. ಇನ್ನು ನಿಮ್ಮ ಮನವಿದ್ದಂತೆ ಮಾಡಬಹುದು.

ಏವಮುಕ್ತಸ್ತಯಾಯೋಗೀತಂದ್ವೀಪಂ ತಮಸಾಕುಲಂ |
ಸುಗಂಧಯುಕ್ತಂತದ್ದೇಹಂ ಚಕಾರಮುನಿಸತ್ತಮಃ ||
ನಹಸ್ಯತೇಕನ್ಯಾತ್ವಂ ವರಂದಾಸ್ಯಾಮಿತೆಪ್ರಿಯೆ |
ಇತ್ಯುಕ್ತ್ವಾಮುನಿಶಾರ್ದೂಲ ಸ್ಸಂಗಮಂಕೃತವಾಂಸ್ತಯಾ ||
ತದಾಜಜ್ಞೆಮಹಾಭಾಗಃಕೃಷ್ಣದ್ವೈಪಾಯನೊಮುನಿಃ |
ಕಮಂಡುಲುಧರಶ್ರೀಮಾನಾವೃತೊಮೃಗಚರ್ಮಣಾ ||
ಹೆಮಪಿಂಗಜಟಾಜೂಟಭ್ರಾಜನ್ಮಸ್ತಕಶೋಭಿತಃ |
ಸಂಜಾತಮಾತ್ರಸ್ಸಹಸಾನಮಸ್ಕೃತ್ವಾತದಾತಯೋಃ ||
ಯಯೌದೇಶಾನ್ಮಹಾಪುಣ್ಯಾಂಸ್ತಪೊನಿಧಿಸಮಾಕುಲಾನ್ |
ತಸ್ಯೋಪನಯನಂಕೆನಕೃತಮೆತನ್ಮಮೊಚ್ಯತಾಂ ||

ಟೀ|| ಹೀಗೆ ಪೇಳಲ್ಪಟ್ಟಯೋಗೀಶ್ವರನಾದ ಮುನೀಶ್ವರನು ಆ ದ್ವೀಪವನ್ನಂಧಕಾರಯುಕ್ತವನ್ನಾಗಿಯೂ ಅವಳ ದೇಹವಂ ಸುಗಂಧವನ್ನಾಗಿಯೂ ಮಾಡಿದನು. ನಿನಗೆ ಕನ್ಯಾಭಾವ ಪೋಗದಂತೆ ವರವಂ ಕೊಡುವೆನೆಂದು ಪೇಳಿ ಆ ಮುನಿಶ್ರೇಷ್ಠನವಳೊಡನೆ ಸಂಗವಂಮಾಡಿದನು. ಆಗ ಥಳಥಳಿಸುವ ಕಾಂತಿಯುಳ್ಳ ಮಹಾಭಾಗ್ಯನಾದ ವ್ಯಾಸಮುನಿಯು ಕಮಂಡಲಧಾರಿಯಾಗಿಯೂ ಕೃಷ್ಣಾಜಿನವಸ್ತ್ರಧಾರಿಯಾಗಿಯೂ ಚಿನ್ನದಂತೆ ಕೆಂಪಾದ ಜಟಾಭಾರದಿಂದ ಶೋಭಿಸುವ ಶಿರಸ್ಸುಳ್ಳವನಾಗಿಯೂ ಪುಟ್ಟಿದನು. ಆಗಲೆ ಆ ತಾಯಿತಂದೆಗಳಿಗೆ ನಮಸ್ಕಾರವಂಮಾಡಿ ತಪಸ್ವಿಗಳಿಂ ಕೂಡಿದ ಪುಣ್ಯದೇಶಗಳಂ ಕುರಿತು ಪೋದನಲ್ಲವೆ ? ಆತನಿಗೆ ಯಾವನು ಉಪನಯನವಂ ಮಾಡಿದನು ? ಪೇಳಲ್ಪಡಲಿ.

ತಥಾಹಿಮಗಿರಿಪ್ರಾಂತೆ ಪ್ರಾಕ್ಯಧಶ್ಚೋರೋಮಹಾನಭೂತ್ |
ಧನಲೋಭೆನಮಹತಾ ಜಘಾನಬ್ರಾಹ್ಮಣಾನ್ಬಹೂನ್ ||
ದೈವಯೊಗೆನತಂದೆಶಂಸಪ್ತೈತೆಮುನಯೋಗಮನ್ |
ತಾನ್ದೃಷ್ಟ್ವಾತಸ್ಕರಃಕ್ರೂರಶ್ಶರಕೋದಂಡಮಂಡಿತಃ ||
ಚರ್ಮಪಾಶಾಸಿಕಲಿತೊ ಗರ್ಜನ್ನೈವಾಯಯೌಕ್ಷಣಾತ್ |
ಅಗತ್ಯಮಾರ್ಗಮಾವೃತ್ಯಮುನೀನಾಮೂರ್ಧ್ವರೆತಸಾಂ |

ಅತಿಷ್ಠತ್ಕ್ರೂರಕರ್ಮಾಯಂಕಾಲಾಂಜನಸಮದ್ಯುತಿಃ ||
ತದಾತುಮುನಿಸಾಮರ್ಥ್ಯಾತ್ತಸ್ಯಬುದ್ಧಿರಜಾಯತ |
ಕೆಯೂಯಂಮುನಿಶಾರ್ದೂಲಾಭವದ್ಭಿಃ ಸ್ನೇಹಮಾಗಮಃ ||
ವ್ಯಾಧಾನ್ವಯೆಸಮುತ್ಪನ್ನಃ ಕೃಪಾಸತ್ಯವಿವರ್ಜಿತಃ |
ಬಹುನ್ಯೋಕ್ತೇನಮುನಯಃ ಕಿಮಸ್ತಿಕುಟಿಲಾತ್ಮನಃ ||
ಭವತ್ಸಂದರ್ಶನೆನಾದ್ಯ ಸಮುತ್ಪನ್ನಾಮಹಾಮತಿಃ |
ಮಮಾದ್ಯಕತರಣೋಪಾಯಂ ಕಾರುಣ್ಯಾದ್ಬ್ರೂತಸತ್ವರಂ ||
ಸತ್ಯಂಸತ್ಯಂಪುನಸ್ಸತ್ಯಂ ಯೂಯಂಹಿಗುರವೋಮಮ |
ಏವಮುಕ್ತ್ವಾತುಋಷಿವರಾಶ್ಚೋರೇಣವಿಪಿನಾಂತರೆ ||
ಅನುಗ್ರಹಂತತಶ್ಚಕ್ರುರ್ದಯಯಾಸಂಪ್ಲುತಾತ್ಮಕಾಃ |
ತದನುಗ್ರಹಮಾಸಾದ್ಯವ್ಯಾಧಃಕ್ರೂರವಿಚೇಷ್ಟಿತಃ ||
ವಾಲ್ಮೀಕಿರಿತಿವಿಖ್ಯಾತೋಮುನಿಮರ್ುನಿನಮಸ್ಕೃತಃ |
ಬಭೂವಚತದಾತಸ್ಯಸಂಸ್ಕಾರಃಕೆನವಾಕೃತಃ ||

ಟೀ|| ಇದರಂತೆ ಹಿಮವತ್ಪರ್ವತದ ಸಮೀಪದಲ್ಲಿ ಕಿರಾತ ಜಾತಿಯ ವನಾದ ಒಬ್ಬದೊಡ್ಡ ಕಳ್ಳನಿದ್ದನು. ಅವನು ಧನಾಪೇಕ್ಷೆಯಿಂದನೇಕ ಬ್ರಾಹ್ಮಣರಂ ಹೊಡೆಯುತ್ತಿದ್ದನು. ದೈವಯೋಗದಿಂದಾಸ್ಥಳಕ್ಕೆ ಸಪ್ತರ್ಷಿಗಳು ಪೋದರು. ಅವರಂ ಕಂಡಾಕ್ರೂರನಾದ ಕಳ್ಳನು ಧನುರ್ಬಾಣ ಖಡ್ಗ ಖಟಪಾಶಂಗಳಂ ಧರಿಸಿದವನಾಗಿ ಗರ್ಜಿಸುತ್ತಾ ಕ್ಷಣಮಾತ್ರದಿಂದಲೇ ಅಲ್ಲಿಗೆ ಬಂದನು. ಕಾಡಿಗೆಯಂತೆ ಕಪ್ಪಾದ ಒಡಲುಳ್ಳ ಕಳ್ಳನು ಊರ್ಧ್ವರೇತಸ್ಕರಾದ ಮುನಿಗಳ ಮಾರ್ಗವಂ ತಡೆದುಕೊಂಡು ನಿಂತನು. ಆಗ ಮುನಿಗಳ ಮಹಿಮೆಯಿಂದವನು ಒಳ್ಳೆ ಬುದ್ಧಿಯುಳ್ಳವನಾದನು. ಎಲೈ ಮುನಿಶ್ರೇಷ್ಠರಿರಾ, ನೀವು ಯಾರು ? ನಿಮಗೆ ಶಿಷ್ಯನಾಗಿ ನಾನು ಬಂದಿರುವೆನು. ನಾನು ದಯಾಸತ್ಯಗಳಿಲ್ಲದೆ ಕಿರಾತಕುಲದಲ್ಲಿ ಹುಟ್ಟಿದವನು; ಬಲುಮಾತಿನಿಂದೇನು ವಕ್ರಮತಿಯಾದ ನನಗೆ ಒಳ್ಳೇ ಬುದ್ಧಿಯುದಿಸಿರುವದು. ಮೂರು ಬಾರಿಗೂ ಯಥಾರ್ಥವಾಗ್ಗಿ ನೀವೇ ನನಿಗೆ ಗುರುಗಳು. ನನಿಗೆ ಸಂಸಾರಸಮುದ್ರವಂ ದಾಟುವ ಉಪಾಯವಂ ಕರುಣೆಯಿಂದ ಶೀಘ್ರವಾಗಿ ಪೇಳುವವರಾಗಿರಿ ಎಂದು ಕಾಡಿನಲ್ಲಿ ಕಳ್ಳನಿಂಪೇಳಲ್ಪಟ್ಟ ಋಷಿ

ಶ್ರೇಷ್ಠರು ದಯದಿಂದಾರ್ದ್ರವಾದ ಮನವುಳ್ಳವರಾಗಿ ಅವನಿಗೆ ಅನುಗ್ರಹವಂ ಮಾಡಿದರು. ಅದಂ ಪಡೆದಾಕ್ರೂರ ವ್ಯಾಪಾರನಾದ ಕಿರಾತನು ಮುನಿಗಳಿಂ ನಮಿಸಲ್ಪಡುವ ವಾಲ್ಮೀಕಿಯೆಂಬ ಮುನಿಯಾದನಲ್ಲವೆ? ಅವನಿಗಾಗ ಸಂಸ್ಕಾರವು ಯಾವನಿಂಮಾಡಲ್ಪಟ್ಟಿತು ?

ಏವಮನ್ಯೆ ಮಹಾತ್ಮಾನೊ ಹಿತ್ವೋಪನಯನಂಕ್ರಿಯಾ ।
ತಪಸ್ವಿತ್ವಮನುಪ್ರಾಪ್ತಾಸ್ಸಂತಿ ಭೂಮಂಡಲೆಶುಭೆ ॥
ತೆಷಾಂತೆಜೋವಿಶೇಷೇಣ ಬ್ರಾಹ್ಮಣ್ಯಂಸಮುಪಸ್ಥಿತಂ ।
ಇತೀವಮನುವೃತ್ತಾಂತಂ ಶಿವೋಗಿರಿವರಾತ್ಮಜಾ ॥
ನಾರದಾದ್ಯಾಮಹಾತ್ಮಾನೋವಿಂದಂತಿಪರಮಾರ್ಥತಃ ।
ಅತೋನಾಂಗೀಕರೋಮ್ಯೆತತ್ಕರ್ಮೋಪನಯನಾಭಿದಂ ॥
ತತಶ್ಚೋದ್ವೀಕ್ಷ್ಯಪಿತರಂ ಬಾಂಧವಾಸಕ್ತಮಾನಸಂ ।
ವಿನಿರ್ಯಯೌಸಭಾದೇಶಾದ್ವ್ಯಾಧಮಧ್ಯಾನ್ಮೃಗೊಯಥಾ ॥
ಇತು ಕ್ರಾಂತಕನಕಾಚಲಪ್ರತಿಸಿಥಿರ್ಧೈರ್ಯೈಣದಿವ್ಯಃಪುಮಾ
ನ್ಪಿತ್ರಾದಿಸ್ವಜನೇಷುಹಾರ್ದಜನಿತಾಂತ್ಯಕ್ತ್ವಾಪರಾಂವಿಕ್ರಿಯಾಂ ।
ಗಂತುಂದೇಶಿಕಸನ್ನಿಧಿಂಚಮನಸಾ ನಿಶ್ಚಿತ್ಯತೂರ್ಣಂಯಯೌ
ಹಿತ್ವಾಬಬರ್ಬರಭೂರುಹಾನ್ ಶುಕಇವಪ್ರಾಪ್ತೋರಸಾಲಂಪರಂ ॥
ಇತಿ ಶ್ರೀಬಸವೇಶ್ವರ ಪುರಾಣೆ ಕರ್ಮನಿರಸನಂನಾಮ ಸಪ್ತಮೋಧ್ಯಾಯಃ

ಟೀ ॥ ಹೀಗೆ ಇತರರಾದ ಅನೇಕ ಮಹಾತ್ಮರು ಉಪನಯನವಂ ಬಿಟ್ಟು ಮುನಿತ್ವವಂಪಡೆದರು. ಭೂಮಂಡಲದಲ್ಲಿ ಅವರಿಗೆ ಕರ್ಮದಿಂದಾಗತಕ್ಕ ಬ್ರಾಹ್ಮಣ್ಯವು ತೇಜೋವಿಶೇಷದಿಂ ಸಿದ್ಧವಾಗಿರುವದು. ಈ ನನ್ನ ವೃತ್ತಾಂತವಂ ಪಾರ್ವತಿ ಪರಮೇಶ್ವರರು ನಾರದಾದಿಗಳು ಸಹ ತಿಳದಿರುವರು. ಕರ್ಮದಿಂದ ವೇದಾಧ್ಯಯನ ಪೂರ್ವಕವಾಗಿ ಚಿತ್ತಶುದ್ಧಿಯಾದ ಬಳಿಕ ಬರತಕ್ಕ ಬ್ರಾಹ್ಮಣ್ಯವು ಶಿವದೀಕ್ಷಾಪೂರ್ವಕವಾಗಿ ಶಿವಲಿಂಗಧಾರಣ, ಮಹಾಮಂತ್ರೋಪದೇಶ ರೂಪವಾದ ಗುರುಕರುಣಾವಿಶೇಷದಿಂದ ಸಿದ್ಧವಾಗಿರುವದಾದಕಾರಣ ಉಪನಯನ ಕರ್ಮವನ್ನು ನಾನು ಒಡಂಬಡುವದಿಲ್ಲ. ಎಂದು ಪೇಳಿ ಬಂಧುಗಳಲ್ಲಾಸಕ್ತವಾದ ಮನಸ್ಸುಳ್ಳ ತಂದೆಯಂನೋಡಿ ವ್ಯಾಧರ ಮಧ್ಯದಿಂಪೋಗುವ ಮೃಗದಂತೆ

ಸಭಾಮಧ್ಯದಿಂ ದಾಟಿಪೋದನು. ಧೈರ್ಯದಿಂದ ಮೇರುವಿಗೆ ಸಮಾನನಾದ ಬಸವೇಶ್ವರನೆಂಬಭಿಧಾನವುಳ್ಳ ಆ ದಿವ್ಯಪುರುಷನು ಈ ಪ್ರಕಾರ ಪೇಳಿ ತಂದೆ ಮೊದಲಾದ ಸ್ವಜನರಲ್ಲಿ ಸ್ನೇಹದಿಂದುಂಟಾದ ವಿಕಾರವಂ ಬಿಟ್ಟು ಗುರುಸನ್ನಿಧಿಗೆ ಪೋಗಲೋಸುಗ ಮನದೊಳ್ ನಿಶ್ಚೈಸಿ ಬೂರಗದ ಮರವಂ ಬಿಟ್ಟು ಸೀಮಾವಿನಮರಗಳಂ ಪೊಂದುವ ಗಿಳಿಯಂತೆ ಸಭಾಜನಗಳಂಬಿಟ್ಟು ಹೊರಕ್ಕೆ ಹೋದನೆಂಬಲ್ಲಿಗೆ ಬಸವಪುರಾಣದೊಳ್ ಕರ್ಮನಿರಸನವೆಂಬೇಳನೆ ಅಧ್ಯಾಯವು ಪರಿಸಮಾಪ್ತವಾದುದು.

ಶಿವಧರ್ಮಸ್ಥಾಪನಾರ್ಥಂಮರ್ತ್ಯೇ ಲೋಕಾವತಾರಿಣೆ |
ನಮಃ ಶ್ರೀಬಸವೇಶಾಯನಂದೀಶಾಯಪರಾತ್ಮನೆ ||

ಇತಿಶಿವಂ.





